KA / BG-GPO / 2515 / WPP-47 / 2009-2011


# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಮೇ ೧೨, ೨೦೧೧, (ವೈಶಾಖ ೨೨, ಶಕ ವರ್ಷ ೧೯೩೩) | ಸಂಚಿಕೆ ೧೯ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಬಿಜಾಪುರ ಕಂದಾಯ ತಾಲ್ಲೂಕಿನಲ್ಲಿ ಖಾಲಿ ಇರುವ ನೋಟರಿ ಹುದ್ದೆ ಭರ್ತಿ ಮಾಡುವ ಬಗ್ಗೆ (ಶ್ರೀ ಆರ್.ಸಿ. ಶಿವಪೂಜಿ, ನೋಟರಿ ಬಿಜಾಪುರ ಇವರ ನಿಧನದಿಂದ ತೆರವು)

**ಓದಲಾಗಿದೆ :**

1. ಸರ್ಕಾರದ ಪತ್ರ ಸಂಖ್ಯೆ ಲಾ 101 ಎಲ್‌ಸಿಎಲ್ 09 ದಿನಾಂಕ 1/3–03–10 ಮತ್ತು 11–08–10.
2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ ಇವರ ಪತ್ರ ಸಂಖ್ಯೆ ಸಿಪಿಎನ್ 4285/10 ದಿನಾಂಕ 18–10–2010.
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ ಇವರ ಪತ್ರ ಸಂಖ್ಯೆ ಸಿಪಿಎನ್ 4539/10 ದಿನಾಂಕ 08–11–2010.
4. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ ಜಿಎಸ್ಆರ್ 114(ಇ) ದಿನಾಂಕ 24–02–2009.
5. ಅಧಿಸೂಚನೆ ಸಂಖ್ಯೆ ಲಾ 61 ಎಲ್‌ಸಿಎಲ್ 09 ದಿನಾಂಕ 24–07–2010.
6. ಸಂದರ್ಶನ ಸೂಚನಾ ಪತ್ರ ಸಂಖ್ಯೆ : ಲಾ 101 ಎಲ್‌ಸಿಎಲ್ 2009 ದಿನಾಂಕ 03–12–2010.

**ಪ್ರಸ್ತಾವನೆ :**

ಬಿಜಾಪುರ ಕಂದಾಯ ತಾಲ್ಲೂಕಿನಲ್ಲಿ ನೋಟರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಶ್ರೀ ಆರ್.ಸಿ. ಶಿವಪೂಜಿ ಇವರು ನಿಧನರಾಗಿರುವುದಾಗಿ ದಿನಾಂಕ 01/02–02–2010 ರಂದು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರರವರು ನೀಡಿದ ವರದಿಯ ಹಿನ್ನೆಲೆಯಲ್ಲಿ ಶ್ರೀಯುತರ ನಿಧನದಿಂದ ತೆರವಾದ ನೋಟರಿ ಹುದ್ದೆಯನ್ನು ಭರ್ತಿ ಮಾಡಲು ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಬಿಜಾಪುರ ಇವರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 1/3–3–10 ಮತ್ತು 11–08–2010ರ ಪತ್ರಗಳಲ್ಲಿ ಕೋರಲಾಗಿತ್ತು. ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ 2 ಮತ್ತು 3ರ ದಿನಾಂಕ 18–10–10 ಹಾಗೂ 08–11–10 ಪತ್ರಗಳಲ್ಲಿ 7 ಜನರ ಮೆಮೋರಿಯಲ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಬಿಜಾಪುರ ಇವರು ಸಲ್ಲಿಸಿರುತ್ತಾರೆ. ಆ ಪ್ರಸ್ತಾವನೆಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ನೋಟರಿಗಳ ತಿದ್ದುಪಡಿ ನಿಯಮಗಳು 2009 ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (5)ರಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ದಿನಾಂಕ 20–12–10 ರಂದು ಆಯ್ಕೆ ಪಟ್ಟಿಯನ್ನು ಸಲ್ಲಿಸಿದೆ.

ಸಂದರ್ಶನಾ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಲಾ 101 ಎಲ್‌ಸಿಎಲ್ 2009, ಬೆಂಗಳೂರು, ದಿನಾಂಕ : 19ನೇ ಫೆಬ್ರವರಿ 2011.**

ನೋಟರಿ ಅಧಿನಿಯಮ (1952) ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿ ನಿಯಮಗಳು (1956) ಹಾಗೂ ತಿದ್ದುಪಡಿ ನಿಯಮಗಳು 2009 ರನ್ವಯ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದಂತೆ ಕುಮಾರಿ ಕಮಲಾ ಎಸ್. ಕಂದಗಲ್, ವಕೀಲರು, ಷಹಾಪೇಟೆಗಲ್ಲಿ, ಬಿಜಾಪುರ ರವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಬಿಜಾಪುರ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯಪರಿಪಾಲನೆ–501–0–ಇತರೆ ಸ್ವೀಕೃತಿಗಳು–06 ಇತರೆ ಬಾಬುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗದಿಪಡಿಸಲಾದ ರೂ.1000–00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಸದರಿಯವರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ನಾ. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಪಿ. ಆರ್. 549 ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಸರ್ಕಾರದ ಕಾರ್ಯದರ್ಶಿ (ಭೂಮಿ ಮತ್ತು ಅರ್ಬನ್ ಪ್ರಾಪರ್ಟಿ ಓನರ್‌ಶಿಪ್ ರೆಕಾರ್ಡ್ಸ್) ಕಂದಾಯ ಇಲಾಖೆ ಅವರ ಆಪ್ತ ಶಾಖೆಗೆ ಪೂರಕ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 2 ಸಸಿವಿ 2003, ದಿನಾಂಕ: 11–06–2003.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 628 ಸಅಸೇ 2010, ದಿನಾಂಕ: 31–12–2010.
3. ಸರ್ಕಾರದ ಕಾರ್ಯದರ್ಶಿ (ಭೂಮಿ ಮತ್ತು ಅರ್ಬನ್ ಪ್ರಾಪರ್ಟಿ ಓನರ್‌ಶಿಪ್ ರೆಕಾರ್ಡ್ಸ್) ಕಂದಾಯ ಇಲಾಖೆ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ ಆರ್‌ಡಿ 01 ಕಾ (ಭೂಮಿ ಮತ್ತು ಯುಪಿಓಆರ್) 2011, ದಿನಾಂಕ 18–01–2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 11–06–2003ರ ಆದೇಶದಲ್ಲಿ ಸರ್ಕಾರದ ವಿಶೇಷ ಕಾರ್ಯದರ್ಶಿ (ಭೂಮಿ ಪ್ರಾಜೆಕ್ಟ್), ಕಂದಾಯ ಇಲಾಖೆ ಹುದ್ದೆಗೆ ನಿಗಧಿಪಡಿಸಿರುವ ಪೂರಕ ಸಿಬ್ಬಂದಿ ಹುದ್ದೆಗಳನ್ನು ರದ್ದುಗೊಳಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 31–12–2010ರ ಆದೇಶದಲ್ಲಿ ಕಂದಾಯ ಇಲಾಖೆಯ ವಿಶೇಷ ಕಾರ್ಯದರ್ಶಿ (ಭೂಮಿ) ಹುದ್ದೆಯ ಪದನಾಮವನ್ನು ಕಾರ್ಯದರ್ಶಿ (ಭೂಮಿ ಮತ್ತು ಅರ್ಬನ್ ಪ್ರಾಪರ್ಟಿ ಓನರ್‌ಶಿಪ್ ರೆಕಾರ್ಡ್ಸ್) ಎಂದು ಮರುಪದನಾಮೀಕರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ 18–01–2011ರ ಅರೆ ಸರ್ಕಾರಿ ಪತ್ರದಲ್ಲಿ ಸರ್ಕಾರದ ಕಾರ್ಯದರ್ಶಿ (ಭೂಮಿ ಮತ್ತು ಅರ್ಬನ್ ಪ್ರಾಪರ್ಟಿ ಓನರ್‌ಶಿಪ್ ರೆಕಾರ್ಡ್ಸ್) ಕಂದಾಯ ಇಲಾಖೆ ಇವರ ಆಪ್ತ ಶಾಖೆಗೆ ಈ ಕೆಳಕಂಡ ಪೂರಕ ಹುದ್ದೆಗಳನ್ನು ಸೃಜಿಸುವಂತೆ ಕೋರಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಭಾಷಾಂತರಕಾರರು / ಶಾಖಾಧಿಕಾರಿ / ಹಿರಿಯ ಸಹಾಯಕ / ಸಹಾಯಕ | 1 ಹುದ್ದೆ |
| 2 | ಶೀಘ್ರಲಿಪಿಗಾರರು | 2 ಹುದ್ದೆಗಳು |
| 3 | ಹಿರಿಯ ಸಹಾಯಕ / ಸಹಾಯಕ | 1 ಹುದ್ದೆ |
| 4 | ವಾಹನ ಚಾಲಕ | 1 ಹುದ್ದೆ |
| 5 | ಗ್ರೂಪ್–ಡಿ | 2 ಹುದ್ದೆಗಳು |
| | **ಒಟ್ಟು** | **7 ಹುದ್ದೆಗಳು** |

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 68 ಸಅಸೇ 2011, ಬೆಂಗಳೂರು, ದಿನಾಂಕ : 21ನೇ ಫೆಬ್ರವರಿ 2011.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಭೂಮಿ ಮತ್ತು ಅರ್ಬನ್ ಪ್ರಾಪರ್ಟಿ ಓನರ್‌ಶಿಪ್ ರೆಕಾರ್ಡ್ಸ್) ಅವರ ಆಪ್ತ ಶಾಖೆಗೆ ಈ ಕೆಳಕಂಡ ಪೂರಕ ಹುದ್ದೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ತಾತ್ಕಾಲಿಕವಾಗಿ ಎರಡು ವರ್ಷದ ಅವಧಿಗೆ ಸೃಜಿಸಲಾಗಿದೆ:

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಶೀಘ್ರಲಿಪಿಗಾರರು | 2 ಹುದ್ದೆಗಳು |
| 2 | ಕಿರಿಯ ಸಹಾಯಕ | 1 ಹುದ್ದೆ |
| 3 | ವಾಹನ ಚಾಲಕ | 1 ಹುದ್ದೆ |
| 4 | ದಲಾಯತ್ | 2 ಹುದ್ದೆಗಳು |
| | **ಒಟ್ಟು** | **6 ಹುದ್ದೆಗಳು** |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 100 ವೆಚ್ಚ–12/2011, ದಿನಾಂಕ 07–02–2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ. ಆರ್. 550 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಬಿ.ವಿ. ರಮೇಶ್, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರ ಅಮಾನತ್ತಿನ ಬಗ್ಗೆ.

**ಓದಲಾಗಿದೆ :**
1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ ಲೋಕ್/ಐಎನ್‌ವಿ (ಜಿ)/ಎಂ–46/ಸಿಆರ್–04/2007, ಚಾಮರಾಜನಗರ, ದಿನಾಂಕ 30–11–2007.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 4 ಸೇಇವಿ 2008 ದಿನಾಂಕ: 06–02–2008.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 4 ಸೇಇವಿ 2008 ದಿನಾಂಕ: 23–09–2008.
4. ಕೆ.ಎ.ಟಿ.ಯ ಅರ್ಜಿ ಸಂಖ್ಯೆ 3529/2009 ರಲ್ಲಿ ದಿನಾಂಕ 16–11–2009ರಂದು ನೀಡಿರುವ ತೀರ್ಪು.
5. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 4 ಸೇಇವಿ 2008 ದಿನಾಂಕ: 16–02–2010.

**ಪ್ರಸ್ತಾವನೆ :**

**ಪ್ರಕರಣದ ವಿವರ:**

ದಿನಾಂಕ 28–11–2007 ರಂದು ಶ್ರೀ ಶಿವಮೂರ್ತಿ ಬಿನ್ ಲಿಂಗಯ್ಯ, ಮದ್ದೂರು ಗ್ರಾಮ, ಯಳಂದೂರು ತಾಲ್ಲೂಕು ಇವರು ಚಾಮರಾಜನಗರ ಲೋಕಾಯುಕ್ತ ಠಾಣೆಗೆ ಹಾಜರಾಗಿ ತಾವು ಮತ್ತು ಇತರೆ ಮೂವರು ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮದ ಸ್ವ–ಉದ್ಯೋಗ ಯೋಜನೆಯಡಿ ಸಾಲ ಸೌಲಭ್ಯಕ್ಕಾಗಿ ಅರ್ಜಿ ಸಲ್ಲಿಸಿದ್ದು, ಪರಿಶೀಲನೆ ಹಾಗೂ ಫಲಾನುಭವಿಗಳ ಆಯ್ಕೆಗಾಗಿ ಅರ್ಜಿಗಳನ್ನು ಯಳಂದೂರು ಕಾರ್ಯನಿರ್ವಾಹಕ ಅಧಿಕಾರಿ ಕಛೇರಿಗೆ ಕಳುಹಿಸಿದ್ದು ದಿನಾಂಕ 27–11–2007 ರಂದು, ಶ್ರೀ ಬಿ.ವಿ. ರಮೇಶ್, ಕಾರ್ಯನಿರ್ವಾಹಕ ಅಧಿಕಾರಿ ಇವರನ್ನು ಭೇಟಿಯಾದಾಗ ಅರ್ಜಿಗಳನ್ನು ಶಿಫಾರಸ್ಸು ಮಾಡಿ ಕಳುಹಿಸಿಕೊಡಲು ಕೋರಿದಾಗ ಆರೋಪಿತರಾದ ಶ್ರೀ ಬಿ.ವಿ. ರಮೇಶ್ ಇವರು ತಲಾ ರೂ. 2,500/– ರಂತೆ ರೂ. 10,000/– ಲಂಚದ ಹಣಕ್ಕೆ ಒತ್ತಾಯ ಮಾಡಿದ್ದು, ನಂತರ ಎಲ್ಲರ ಪರವಾಗಿ ರೂ. 4,500/– ಲಂಚ ಪಡೆದುಕೊಳ್ಳಲು ಒಪ್ಪಿದ್ದ ಮೇರೆಗೆ ಫಿರ್ಯಾದುದಾರರು ಲಂಚ ಕೊಡಲು ಇಷ್ಟವಿಲ್ಲದ ಕಾರಣ, ಈ ಬಗ್ಗೆ ಸೂಕ್ತ ಕಾನೂನು ಕ್ರಮ ತೆಗೆದುಕೊಳ್ಳುವಂತೆ ಕೋರಿದ್ದರು.

ಸದರಿ ದೂರಿನನ್ವಯ ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಚಾಮರಾಜನಗರ ಪೊಲೀಸ್ ಠಾಣೆ, ಚಾಮರಾಜನಗರ ಇವರು ಮೇಲ್ಕಂಡ ನೌಕರರ ವಿರುದ್ಧ ಭ್ರಷ್ಟಾಚಾರ ನಿರೋಧಕ ಕಾಯಿದೆ 1988ರ ಕಲಂ 7, 13(1)ರ ಜೊತೆಗೆ 13(2)ರ ಪ್ರಕಾರ ಪ್ರಕರಣವನ್ನು ದಾಖಲು ಮಾಡಿಕೊಂಡು ದಿನಾಂಕ 28–11–2007ರಲ್ಲಿ ಬೀಸಿದ ಬಲೆಯು ಯಶಸ್ವಿಯಾಗಿದ್ದು, ಶ್ರೀ ಬಿ.ವಿ. ರಮೇಶ್, ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯಿತಿ, ಯಳಂದೂರು ಇವರು ತಮ್ಮ ಕಚೇರಿಯಲ್ಲಿ ನೆರಳು ಸಾಕ್ಷಿಯ ಸಮಕ್ಷಮ ಫಿರ್ಯಾದುದಾರರಿಂದ ಲಂಚದ ಹಣ ರೂ. 4,500–00 ಗಳನ್ನು ಒತ್ತಾಯಿಸಿ ಸ್ವೀಕರಿಸಿ, ಚಾಮರಾಜನಗರ ಲೋಕಾಯುಕ್ತ ಪೊಲೀಸರ ಬಲೆಗೆ ಸಿಕ್ಕಿಬಿದ್ದಿದ್ದ ಮೇರೆಗೆ ಆರೋಪಿತರನ್ನು ತನಿಖೆಯ ಸಲುವಾಗಿ ದಸ್ತಗಿರಿ ಮಾಡಲಾಗಿತ್ತು.

ಮೇಲೆ (1)ರಲ್ಲಿ ಓದಲಾದ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರದಲ್ಲಿ ಶ್ರೀ ಬಿ.ವಿ. ರಮೇಶ್, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರು ನಿಯೋಜನೆ ಮೇಲೆ ಕಾರ್ಯ ನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಯಳಂದೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಸದರಿ ಅಧಿಕಾರಿಯ ಫಿರ್ಯಾದುದಾರರಾದ ಶ್ರೀ ಶಿವಮೂರ್ತಿ ಬಿನ್ ಲಿಂಗಯ್ಯ, ಮದ್ದೂರು ಗ್ರಾಮ, ಯಳಂದೂರು ತಾಲ್ಲೂಕು ಇವರಿಂದ ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮದ ಸ್ವ–ಉದ್ಯೋಗ ಯೋಜನೆಯಡಿ ಸಾಲ ಸೌಲಭ್ಯಕ್ಕಾಗಿ ರೂ.10,000 ಲಂಚದ ಹಣ ಒತ್ತಾಯ ಮಾಡಿದ್ದು. ಫಿರ್ಯಾದುದಾರರು ಲಂಚ ನೀಡಲು ಇಷ್ಟವಿಲ್ಲದ ಕಾರಣ ಲೋಕಾಯುಕ್ತ ಪೊಲೀಸರಿಗೆ ದೂರು ನೀಡಿದ್ದರ ಮೇರೆಗೆ ಲೋಕಾಯುಕ್ತ ಪೊಲೀಸರು ಚಾಮರಾಜನಗರ ಪೊಲೀಸ್‌ಠಾಣೆಯಲ್ಲಿ ಅಧಿಕಾರಿಯ ವಿರುದ್ಧ ಭ್ರಷ್ಟಾಚಾರ ನಿರೋಧಕ ಕಾಯಿದೆಯಡಿ ಮೊಕದ್ದಮೆ ನಂ. 04/2007 ರಲ್ಲಿ ಪ್ರಕರಣವನ್ನು ದಾಖಲು ಮಾಡಿಕೊಂಡು ದಿನಾಂಕ 28–11–2007ರಲ್ಲಿ ಬೀಸಿದ ಬಲೆಯಲ್ಲಿ ಫಲಾನುಭವಿಗಳಿಂದ ಲಂಚದ ಹಣ ರೂ. 4,500–00ಗಳನ್ನು ಒತ್ತಾಯಿಸಿ ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತ ಪೊಲೀಸರ ಬಲೆಗೆ ಸಿಕ್ಕಿಬಿದ್ದಿದ್ದು, ಆರೋಪಿತರನ್ನು ತನಿಖೆಯ ಸಲುವಾಗಿ ದಸ್ತಗಿರಿ ಮಾಡಲಾಗಿದೆಯೆಂದು ತಿಳಿಸುತ್ತಾ, ಸದರಿ ಅಧಿಕಾರಿಯ ಮೇಲಿನ ಭ್ರಷ್ಟಾಚಾರದ ಆಪಾದನೆಯು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆಯೆಂದೂ ಹಾಗೂ ಅಧಿಕಾರಿಯು ಸುಗಮ ತನಿಖೆಗೆ ಅಡ್ಡಿಯುಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಅಥವಾ ಸಾಕ್ಷಿ ಪುರಾವೆಗಳನ್ನು ನಾಶ ಮಾಡುವ ಸಾಧ್ಯತೆ ಇರುವುದರಿಂದ ಅವರನ್ನು ಕೂಡಲೇ ಅಮಾನತ್ತಿನಲ್ಲಿಡುವಂತೆ ಕೋರಿದ್ದರು.

ಕರ್ನಾಟಕ ಲೋಕಾಯುಕ್ತರ ದಿನಾಂಕ 30–11–2007ರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಶ್ರೀ ಬಿ.ವಿ. ರಮೇಶ್, ಅಧೀನ ಕಾರ್ಯದರ್ಶಿ ಇವರ ವಿರುದ್ಧದ ಭ್ರಷ್ಟಾಚಾರದ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡುಬಂದ ಕಾರಣ ಹಾಗೂ ಅಧಿಕಾರಿಯ ವಿರುದ್ಧ ಭ್ರಷ್ಟಾಚಾರ ನಿರೋಧಕ ಕಾಯಿದೆಯಡಿ ಚಾಮರಾಜನಗರ ಲೋಕಾಯುಕ್ತ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ 04/2007 ದಾಖಲಾದ ಹಿನ್ನೆಲೆಯಲ್ಲಿ ಕ.ನಾ.ಸೇ. (ಸಿಸಿ) ನಿಯಮಾವಳಿ 1957ರ ನಿಯಮ 10(1)(ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಬಿ.ವಿ. ರಮೇಶ್ ಇವರನ್ನು ಲೋಕಾಯುಕ್ತ ವಿಚಾರಣೆ ಬಾಕಿಯಿಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿತ್ತು.

ಕರ್ನಾಟಕ ಲೋಕಾಯುಕ್ತದಿಂದ ದಿನಾಂಕ 30–07–2008 ರಂದು ಸ್ವೀಕೃತವಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ 23–09–2008ರ ಸರ್ಕಾರದ ಆದೇಶದಲ್ಲಿ ಶ್ರೀ ಬಿ.ವಿ. ರಮೇಶ್, ಅಧೀನ ಕಾರ್ಯದರ್ಶಿ ಇವರನ್ನು ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988ರ ಕಲಂ 7(13)(1)(ಡಿ) ರೊಡನೆ ಓದಿಕೊಂಡಂತೆ ಕಲಂ (13)(2) ರನ್ವಯ ಅವರ ವಿರುದ್ಧದ ಆರೋಪಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಪಡಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಮೇಲೆ ಕ್ರಮ ಸಂಖ್ಯೆ (4)ರ ಕೆ.ಎ.ಟಿ. ಅರ್ಜಿಯಲ್ಲಿ ಶ್ರೀ ಬಿ.ವಿ. ರಮೇಶ್, ಅಧೀನ ಕಾರ್ಯದರ್ಶಿ ಇವರು ತಮ್ಮನ್ನು ಅಮಾನತ್ತುಗೊಳಿಸಲಾದ ದಿನಾಂಕ 06–02–2008ರ ಆದೇಶವನ್ನು ಪ್ರಶ್ನಿಸಿ ಕೆ.ಎ.ಟಿ.ಯಲ್ಲಿ ಅರ್ಜಿ ಸಂಖ್ಯೆ 3529/2009ನ್ನು ಸಲ್ಲಿಸಿದ್ದರು. ನ್ಯಾಯ ಮಂಡಳಿಯು ಸದರಿ ಅರ್ಜಿಯನ್ನು ವಿಲೇಗೊಳಿಸುತ್ತಾ, ದಿನಾಂಕ 16–11–2009ರಂದು ಕೆಳಕಂಡಂತೆ ಆದೇಶಿಸಿದೆ.

"7. In the present case the order only mentions the facts stated in the letter of the Additional Director General of Police, Karnataka Lokayukta and in the second para it is observed that on perusal of the letter it was clear that

the charge had been well founded and therefore pending Inquiry the applicant has to be suspended. The order does not show the Independent examination of the matter by the Government to find out as to whether there was **prima facie** evidence to support the charge and consequently the order of suspension is not sustainable since it has been passed without complying with Rule 10(3) of the CCA Rules.

For the above said reasons, the application is allowed and the Order of the Government in No. DPAR 4 SE EE VI 2008, dated 06-02-2009 (Annexure-A2) is quashed keeping liberty to the Government, if it so desires, to pass a fresh order after complying with Rule 10(3) of the CCA Rules.

ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ದಿನಾಂಕ 16–02–2010 ರ ಸರ್ಕಾರದ ಆದೇಶದಲ್ಲಿ ಶ್ರೀ ಬಿ.ವಿ. ರಮೇಶ್, ಅಧೀನ ಕಾರ್ಯದರ್ಶಿ ಇವರ ವಿರುದ್ಧ ಶಿಸ್ತು ಕ್ರಮ ಬಾಕಿಯಿಟ್ಟು ಸದರಿಯವರ ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ಪುನರ್‌ಸ್ಥಾಪಿಸಲಾಗಿದೆ ಹಾಗೂ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ 16–11–2009ರ ಆದೇಶದಂತೆ ಮತ್ತೊಮ್ಮೆ ಪ್ರಕರಣವನ್ನು ಕೂಲಂಕಷವಾಗಿ ಮರುಪರಿಶೀಲಿಸಿದೆ.

ಸರ್ಕಾರವು ಕರ್ನಾಟಕ ಲೋಕಾಯುಕ್ತದಿಂದ ಸ್ವೀಕೃತವಾದ ದಿನಾಂಕ 3–11–2007ರ ಪ್ರಸ್ತಾವನೆಯನ್ನು ಪರಿಶೀಲಿಸಿ ಹಾಗೂ ಶ್ರೀ ಬಿ.ವಿ. ರಮೇಶ್, ಅಧೀನ ಕಾರ್ಯದರ್ಶಿ ಇವರ ವಿರುದ್ಧದ ಭ್ರಷ್ಟಾಚಾರದ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡುಬಂದ ಕಾರಣ ಹಾಗೂ ಅಧಿಕಾರಿಯು ಸಾಕ್ಷಿ ಪುರಾವೆಗಳನ್ನು ನಾಶಪಡಿಸುವ ಸಾಧ್ಯತೆ ಇರುವುದರಿಂದ ಮತ್ತು ಇವರ ವಿರುದ್ಧ ಭ್ರಷ್ಟಾಚಾರ ನಿರೋಧಕ ಕಾಯಿದೆ 1988ರ ಕಲಂ 7, 13(1)(ಡಿ) ಜೊತೆಗೆ 13(2)ರಡಿಯಲ್ಲಿ ಚಾಮರಾಜನಗರ ಲೋಕಾಯುಕ್ತ ಠಾಣೆ ಮೊಕದ್ದಮೆ ಸಂಖ್ಯೆ 04/2007ರಲ್ಲಿ ದಾಖಲಾದ ಹಿನ್ನೆಲೆಯಲ್ಲಿ ಪ್ರಕರಣವನ್ನು ಕ.ನಾ.ಸೇ. (ಸಿಸಿಎ) ನಿಯಮ 10(3)ರನ್ವಯ ಪರಿಶೀಲಿಸಿ ದೃಢಪಡಿಸಿಕೊಂಡು ಮತ್ತು ಫಿರ್ಯಾದುದಾರರು ಲಂಚ ಕೇಳುತ್ತಿದ್ದಾರೆಂದು ನೀಡಲಾದ ಅರ್ಜಿ, ಟ್ರ್ಯಾಪ್ ಆದ ನಂತರ ಲೋಕಾಯುಕ್ತ ಪೊಲೀಸರು ನಡೆಸಿರುವ ಅಸೆಸ್‌ಮೆಂಟ್ ಮತ್ತು ಪಂಚನಾಮೆಗಳ ಮಹಜರ್‌ಗಳನ್ನು ಹಾಗೂ ಆರೋಪಿಯ ಎಡಗೈ ಹೆಬ್ಬೆರಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಿಂದ ಪರೀಕ್ಷಿಸಿದ ವಿವರಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರವೇ ಶ್ರೀ ಬಿ.ವಿ. ರಮೇಶ್, ಅಧೀನ ಕಾರ್ಯದರ್ಶಿ ಇವರನ್ನು ದಿನಾಂಕ 06–02–2008ರ ಆದೇಶದಲ್ಲಿ ವಿಚಾರಣೆ ಬಾಕಿಯಿಟ್ಟು ಸೇವೆಯಿಂದ ಅಮಾನತ್ತುಗೊಳಿಸಲು ನಿಯಮಾನುಸಾರ ಮತ್ತು ವಿಚಕ್ಷಣಾಪೂರ್ವಕವಾಗಿ ಆಲೋಚಿಸಿ ನಿರ್ಧರಿಸಿರುತ್ತದೆ ಹಾಗೂ ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988ರ ಕಲಂ 7(13)(1)(ಡಿ) ರೊಡನೆ ಓದಿಕೊಂಡಂತೆ ಕಲಂ (13)(2)ರನ್ವಯ ಅವರ ವಿರುದ್ಧದ ಆರೋಪಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಪಡಿಸಲು ಮಂಜೂರಾತಿ ನೀಡಿರುತ್ತದೆ.

ಈ ಹಿನ್ನೆಲೆಯಲ್ಲಿ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಆದೇಶವನ್ನು ಗಮನದಲ್ಲಿರಿಸಿಕೊಂಡು ಸರ್ಕಾರವು, ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 04 ಸೇಇವಿ 2008, ಬೆಂಗಳೂರು, ದಿನಾಂಕ : 18ನೇ ಫೆಬ್ರವರಿ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(3)ರನ್ವಯ ಪರಿಶೀಲಿಸಿ ಶ್ರೀ ಬಿ.ವಿ. ರಮೇಶ್, ಅಧೀನ ಕಾರ್ಯದರ್ಶಿ ಇವರ ವಿರುದ್ಧದ ಭ್ರಷ್ಟಾಚಾರದ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡುಬಂದ ಕಾರಣ ಹಾಗೂ ಅಧಿಕಾರಿಯು ಸಾಕ್ಷಿ ಪುರಾವೆಗಳನ್ನು ನಾಶಪಡಿಸುವ ಸಾಧ್ಯತೆ ಇದ್ದ ಕಾರಣ ಮತ್ತು ಇವರ ವಿರುದ್ಧ ಭ್ರಷ್ಟಾಚಾರ ನಿರೋಧಕ ಕಾಯಿದೆ 1988ರ ಕಲಂ 7, 13(1)(ಡಿ) ಜೊತೆಗೆ 13(2) ರಡಿಯಲ್ಲಿ ಚಾಮರಾಜನಗರ ಲೋಕಾಯುಕ್ತ ಠಾಣೆ ಮೊಕದ್ದಮೆ ಸಂಖ್ಯೆ 04/2007ರನ್ನು ದಾಖಲಿಸಿ, ದಸ್ತಗಿರಿ ಮಾಡಿದ್ದ ಹಿನ್ನೆಲೆಯಲ್ಲಿ ಅಧಿಕಾರಿಯವರು ಕರ್ತವ್ಯ ಲೋಪ ಎಸಗಿರುವುದು ಹಾಗೂ ಕರ್ತವ್ಯದಲ್ಲಿ ನಿಷ್ಠೆ ಹೊಂದಿಲ್ಲದಿರುವುದು ಸಾಕ್ಷ್ಯಾಧಾರಗಳಿಂದ ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ, ಸದರಿ ಅಧಿಕಾರಿಯನ್ನು ವಿಚಾರಣೆ ಬಾಕಿಯಿಟ್ಟು ದಿನಾಂಕ 06–02–2008 ರಿಂದ ಜಾರಿಗೆ ಬರುವಂತೆ ಹಾಗೂ ದಿನಾಂಕ 16–02–2010 ರವರೆಗೆ ಸೇವೆಯಿಂದ ಅಮಾನತ್ತಿನಲ್ಲಿಟ್ಟಿದ್ದ ಕ್ರಮವನ್ನು ಸ್ಥಿರೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

ಪಿ. ಆರ್. 551

## ಒಳಾಡಳಿತ ಸಚಿವಾಲಯ

**ವಿಷಯ :** ರಾಜ್ಯದ ವಿವಿಧ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಅಭಿಯೋಗ ಮತ್ತು ಸರ್ಕಾರಿ ಇಲಾಖೆಗೆ ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ ಹಾಗೂ ಪೂರಕ ಸಿಬ್ಬಂದಿಯ ಹುದ್ದೆಗಳ ಸೃಜನೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಲಾ 47 ಎಲ್‌ಸಿಇ 2004 ದಿನಾಂಕ: 23–06–2005.
2. ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ಲಾ 47 ಎಲ್‌ಸಿಇ 2004(ಭಾ), ದಿನಾಂಕ: 08–04–2009.
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂಖ್ಯೆ: ಡಿಪಿಎನ್/ಸಿಶಾ1/109/2009–10, ದಿನಾಂಕ 27–05–2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 23–06–2005ರ ಸರ್ಕಾರದ ಆದೇಶದನ್ವಯ ಬೆಂಗಳೂರಿನಲ್ಲಿ 3 ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ (ಸಂಚಾರಿ) ನ್ಯಾಯಾಲಯಗಳು (ಸಿವಿಲ್ ನ್ಯಾಯಾಧೀಶರು [ಹಿ.ವಿ.] ಶ್ರೇಣಿ), ನೆಲಮಂಗಲದ ಸಿವಿಲ್ ನ್ಯಾಯಾಧೀಶರು (ಹಿ.ವಿ.) ಮತ್ತು ಜೆಎಂಎಫ್‌ಸಿ ನ್ಯಾಯಾಲಯ ಮತ್ತು ಸೌಂದತ್ತಿಯ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿ.ವಿ.) ಮತ್ತು ಜೆಎಂಎಫ್‌ಸಿ ನ್ಯಾಯಾಲಯಗಳನ್ನು ಸ್ಥಾಪಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ 08–04–2009ರ ತಿದ್ದುಪಡಿ ಆದೇಶದನ್ವಯ ಬೆಂಗಳೂರಿನಲ್ಲಿ 3 ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ (ಸಂಚಾರಿ) ನ್ಯಾಯಾಲಯಗಳು (ಸಿವಿಲ್ ನ್ಯಾಯಾಧೀಶರು [ಹಿ.ವಿ.] ಶ್ರೇಣಿ), ಎಂದು ನಮೂದಿಸಲಾಗಿರುವುದರ ಬದಲಾಗಿ ಬೆಂಗಳೂರಿನಲ್ಲಿ 3 ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ (ಸಂಚಾರ) ನ್ಯಾಯಾಲಯಗಳು (ಸಿವಿಲ್ ನ್ಯಾಯಾಧೀಶರು [ಕಿರಿಯ ವಿಭಾಗ] ಶ್ರೇಣಿ), ಎಂದು ತಿದ್ದುಪಡಿ ಮಾಡಲಾಗಿದೆ.

ಮೇಲೆ (3) ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ದಿನಾಂಕ 27–05–2010ರ ಪತ್ರದಲ್ಲಿ ಮೇಲೆ (1) ಮತ್ತು (2) ರಲ್ಲಿ ಓದಲಾದ ಸರ್ಕಾರದ ಆದೇಶಗಳನ್ವಯ ಸ್ಥಾಪಿತವಾಗಿರುವ ಬೆಂಗಳೂರಿನ 3 ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ (ಸಂಚಾರಿ) ನ್ಯಾಯಾಲಯಗಳು (ಸಿವಿಲ್ ನ್ಯಾಯಾಧೀಶರು [ಕಿರಿಯ ವಿಭಾಗ] ಶ್ರೇಣಿ), ನೆಲಮಂಗಲದ ಸಿವಿಲ್ ನ್ಯಾಯಾಧೀಶರು (ಹಿ.ವಿ.) ಮತ್ತು ಜೆಎಂಎಫ್‌ಸಿ ನ್ಯಾಯಾಲಯ ಮತ್ತು ಸೌಂದತ್ತಿಯ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯಗಳಲ್ಲಿ ಸರ್ಕಾರದ ಪರವಾಗಿ ರಾಜ್ಯವನ್ನು ಪ್ರತಿನಿಧಿಸಿ ಪ್ರಕರಣಗಳನ್ನು ನಡೆಸಲು, ಸದರಿ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರುಗಳ ಹಾಗೂ ಅವರ ಕಛೇರಿಗೆ ಪೂರಕ ಸಿಬ್ಬಂದಿಯ ಹುದ್ದೆಗಳನ್ನು ಸೃಜಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 348 ಪಿಪಿಇ 2009, ಬೆಂಗಳೂರು, ದಿನಾಂಕ : 14ನೇ ಫೆಬ್ರವರಿ 2011.**

ಪ್ರಸ್ತಾವನೆಯಲ್ಲಿನ ವಿವರಗಳ ಹಿನ್ನೆಲೆಯಲ್ಲಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದ ಅಂಕಣ (2) ರಲ್ಲಿನ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಅಂಕಣ (3)ರಲ್ಲಿನ 5 (ಐದು) ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ ಹಾಗೂ ಅವರ ಕಛೇರಿಗೆ ಹೊಂದಿಕೊಂಡಂತೆ ತಲಾ ಒಂದೊಂದು ಬೆರಳಚ್ಚುಗಾರರ ಮತ್ತು ದಲಾಯತ್‌ರ ಹುದ್ದೆಗಳನ್ನು ಒಟ್ಟಾರೆ 15 ಹುದ್ದೆಗಳನ್ನು ಸದರಿ ನ್ಯಾಯಾಲಯಗಳು ಅಸ್ಥಿತ್ವದಲ್ಲಿರುವವರೆಗೆ ಅಥವಾ ಒಂದು ವರ್ಷದ ಅವಧಿಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ, ಮೊದಲ ಬಾರಿಗೆ ತಾತ್ಕಾಲಿಕವಾಗಿ ಸೃಜಿಸಿದೆ.

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2014 ನ್ಯಾಯಪರಿಪಾಲನೆ –00–114 ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು –0–02 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಇದರಡಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 332 ವೆಚ್ಚ–11/2010, ದಿನಾಂಕ 06–01–2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸ ಮತ್ತು ಅಭಿಯೋಗಗಳು)

## ಅನುಬಂಧ

**ಸರ್ಕಾರದ ಆದೇಶ ಸಂಖ್ಯೆ: ಒಇ 348 ಪಿಪಿಇ 2009, ಬೆಂಗಳೂರು, ದಿನಾಂಕ 14ನೇ ಫೆಬ್ರವರಿ 2011.**

**ರಾಜ್ಯದ ವಿವಿಧ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಸೃಜಿಸಲಾಗಿರುವ ಹುದ್ದೆಗಳು:**

| ಕ್ರ. ಸಂ. | ನ್ಯಾಯಾಲಯದ ಹೆಸರು | ಹುದ್ದೆಯ ಹೆಸರು | ಹುದ್ದೆಯ ಸಂಖ್ಯೆ |
|---|---|---|---|
| 1 | 2 | 3 | 4 |
| 1 | 4ನೇ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ (ಸಂಚಾರಿ) ಸಿವಿಲ್ ನ್ಯಾಯಾಧೀಶರು [ಕಿರಿಯ ವಿಭಾಗ] ನ್ಯಾಯಾಲಯ, ಬೆಂಗಳೂರು ನಗರ | ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರು | 01 |
| | | ಬೆರಳಚ್ಚುಗಾರರು | 01 |
| | | ದಲಾಯತ್ | 01 |
| 2 | 5ನೇ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ (ಸಂಚಾರಿ) ಸಿವಿಲ್ ನ್ಯಾಯಾಧೀಶರು [ಕಿರಿಯ ವಿಭಾಗ] ನ್ಯಾಯಾಲಯ, ಬೆಂಗಳೂರು ನಗರ | ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರು | 01 |
| | | ಬೆರಳಚ್ಚುಗಾರರು | 01 |
| | | ದಲಾಯತ್ | 01 |
| 3 | 6ನೇ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ (ಸಂಚಾರಿ) ಸಿವಿಲ್ ನ್ಯಾಯಾಧೀಶರು [ಕಿರಿಯ ವಿಭಾಗ] ನ್ಯಾಯಾಲಯ, ಬೆಂಗಳೂರು ನಗರ | ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರು | 01 |
| | | ಬೆರಳಚ್ಚುಗಾರರು | 01 |
| | | ದಲಾಯತ್ | 01 |
| 4 | ಸಿವಿಲ್ ಜಡ್ಜ್ (ಹಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ನೆಲಮಂಗಲ | ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರು | 01 |
| | | ಬೆರಳಚ್ಚುಗಾರರು | 01 |
| | | ದಲಾಯತ್ | 01 |

| | | | |
|---|---|---|---|
| 5 | ಹೆಚ್ಚುವರಿ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಸೌಂದತ್ತಿ | ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರು<br>ಬೆರಳಚ್ಚುಗಾರರು<br>ದಲಾಯತ್ | 01<br>01<br>01 |
| ಒಟ್ಟು | | | 15 |

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
ಪಿ.ಆರ್. 552 (ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸ ಮತ್ತು ಅಭಿಯೋಗಗಳು)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನದಲ್ಲಿ ಪ್ರಾಯೋಗಿಕವಾಗಿ ಇತರೆ ಇಲಾಖೆಗಳನ್ನು ಅನುಷ್ಠಾನ ಸಂಸ್ಥೆಗಳನ್ನಾಗಿ ಪರಿಗಣಿಸುವ ಕುರಿತು

**ಓದಲಾಗಿದೆ :** 1. ದಿನಾಂಕ 12–10–2010 ರಂದು ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿಗಳು, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು

2. ದಿನಾಂಕ 07–01–2011 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಚರ್ಚಿಸಿದ ರೀತ್ಯಾ.

**ಪ್ರಸ್ತಾವನೆ :**

ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳಾದ ಜಿಲ್ಲಾ ಪಂಚಾಯತ್, ತಾಲ್ಲೂಕು ಪಂಚಾಯತ್ ಮತ್ತು ಗ್ರಾಮ ಪಂಚಾಯತ್‌ಗಳ ಮೂಲಕ ಅನುಷ್ಠಾನಗೊಳಿಸಲಾಗುತ್ತಿದೆ. ಯೋಜನೆಯ ಅನುಷ್ಠಾನದಲ್ಲಿ ವಿವಿಧ ಇಲಾಖೆಗಳ ಚಟುವಟಿಕೆಗಳನ್ನು ಕೂಡ ಕಾರ್ಯಗತಗೊಳಿಸಲಾಗುತ್ತಿದ್ದು ಸದರಿ ಚಟುವಟಿಕೆಗಳ ಅನುಷ್ಠಾನವನ್ನು ಸಂಬಂಧಪಟ್ಟ ಇಲಾಖಾ ಅನುಷ್ಠಾನಾಧಿಕಾರಿಗಳೇ ನಿರ್ವಹಿಸಲು ಕ್ರಮ ಕೈಗೊಳ್ಳಲಾಗಿದೆ. ಆದರೆ, ಪಂಚಾಯತ್ ರಾಜ್ ಸಂಸ್ಥೆಯನ್ನು ಹೊರತುಪಡಿಸಿ ಯಾವುದೇ ಇಲಾಖೆಯನ್ನು ಸ್ವತಂತ್ರವಾಗಿ ಯೋಜನೆಯಡಿ ಅನುಷ್ಠಾನ ಸಂಸ್ಥೆ ಎಂದು ಪರಿಗಣಿಸಿರುವುದಿಲ್ಲ. ಆದ ಕಾರಣ ಯೋಜನೆಯಡಿ ಉದ್ಯೋಗಕ್ಕಾಗಿ ಸಲ್ಲಿಸುವ ಬೇಡಿಕೆ ಆಧಾರದ ಮೇಲೆ ಅನುಮೋದಿತ ಕಾಮಗಾರಿ ಗುಚ್ಛದಂತೆ ಮಾರ್ಗಸೂಚಿಗಳನ್ವಯ ಆದ್ಯತಾ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ ಹಾಗೂ ಸದರಿ ಕಾಮಗಾರಿಗಳ ಅನುಷ್ಠಾನಕ್ಕಾಗಿ ಗ್ರಾಮ ಪಂಚಾಯತ್‌ಗಳು ಸೂಕ್ತ ಕಾಮಗಾರಿ ಆದೇಶ ಮತ್ತು NMR ಗಳನ್ನು ಅನುಷ್ಠಾನಗೊಳಿಸುವ ಇಲಾಖಾ ಅಧಿಕಾರಿಗಳಿಗೆ ನೀಡುತ್ತಿದ್ದು ಸದರಿ ಕಾಮಗಾರಿಗೆ ಸಂಬಂಧಿಸಿದ ಹಣ ಪಾವತಿಯನ್ನು ಕೂಡ ಗ್ರಾಮ ಪಂಚಾಯತ್‌ಗಳ ಮೂಲಕವೇ ಮಾಡಲಾಗುತ್ತಿರುತ್ತದೆ. ಇದರಿಂದಾಗಿ ಯೋಜನೆ ಅನುಷ್ಠಾನದಲ್ಲಿ ಕಾಲವಿಳಂಬವಾಗುತ್ತಿದ್ದು ಅನುಷ್ಠಾನ ಇಲಾಖೆಗಳು ಅನೇಕ ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ ಹಾಗೂ ಅರಣ್ಯ ಮತ್ತು ತೋಟಗಾರಿಕೆ ಇಲಾಖೆಗಳಲ್ಲಿ ಕೈಗೆತ್ತಿಕೊಂಡಿರುವ ಕಾಮಗಾರಿಗಳನ್ನು ಋತುಮಾನಕ್ಕೆ ಅನುಗುಣವಾಗಿ ಅನುಷ್ಠಾನಗೊಳಿಸಬೇಕಾಗಿರುವುದರಿಂದ ಸದರಿ ಇಲಾಖೆಗಳನ್ನು ಕೂಡ ಅನುಷ್ಠಾನ ಸಂಸ್ಥೆಗಳೆಂದು ಪರಿಗಣಿಸಿ ಯೋಜನೆಯ ಮಾರ್ಗಸೂಚಿಯನ್ವಯ ಸೂಕ್ತ ಅವಕಾಶ ಕಲ್ಪಿಸಿದಲ್ಲಿ ಯೋಜನೆಯನ್ನು ಇನ್ನೂ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಸಾಧ್ಯವಾಗುತ್ತದೆ ಎಂಬುದಾಗಿ ವಿವಿಧ ಇಲಾಖಾ ಮುಖ್ಯಸ್ಥರುಗಳು ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ. ಈ ಸಂಬಂಧ ಪಂಚಾಯತ್ ರಾಜ್ ಸಂಸ್ಥೆಗಳನ್ನೊಳಗೊಂಡಂತೆ ಇತರೆ ಇಲಾಖೆಗಳನ್ನು ಯೋಜನೆಯ ಅನುಷ್ಠಾನದಲ್ಲಿ ಅನುಷ್ಠಾನ ಸಂಸ್ಥೆಗಳೆಂದು ಪರಿಗಣಿಸಿ ಪ್ರಾಯೋಗಿಕವಾಗಿ ಏಳು ಜಿಲ್ಲೆಗಳಲ್ಲಿ ಅರಣ್ಯ ಮತ್ತು ತೋಟಗಾರಿಕೆ ಇಲಾಖೆಯ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಅವಕಾಶ ಕಲ್ಪಿಸಿಕೊಡಲು ತೀರ್ಮಾನಿಸಿದೆ. ಆದುದರಿಂದ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 167 ಉಖಾಯೋ 2010, ಬೆಂಗಳೂರು, ದಿನಾಂಕ : 19ನೇ ಫೆಬ್ರವರಿ 2011.**

ಮೇಲ್ಕಂಡ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ ಪಂಚಾಯತ್ ರಾಜ್ ಸಂಸ್ಥೆಗಳು ಸೇರಿದಂತೆ ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನವನ್ನು ಈ ಕೆಳಕಂಡ ಜಿಲ್ಲೆಗಳಲ್ಲಿ ಸದರಿ ಜಿಲ್ಲೆಗಳ ಮುಂದೆ ತಿಳಿಸಿರುವಂತೆ ವಿವಿಧ ಇಲಾಖೆಗಳನ್ನು ಪ್ರಾಯೋಗಿಕವಾಗಿ ಅನುಷ್ಠಾನ ಸಂಸ್ಥೆಗಳೆಂದು ಗುರುತಿಸಿ ಸಂಬಂಧಪಟ್ಟ ಇಲಾಖೆಗಳಿಗೆ ನಿಗದಿಪಡಿಸಿದ ಕಾಮಗಾರಿಗಳ ಅನುಷ್ಠಾನ ಕಾರ್ಯವನ್ನು ಮಾರ್ಗಸೂಚಿಗಳನ್ವಯ ಹಾಗೂ ಆದೇಶದಲ್ಲಿನ ಅಂಶಗಳನ್ನು ಕಟ್ಟುನಿಟ್ಟಾಗಿ ಪಾಲಿಸಲು ಈ ಮೂಲಕ ಆದೇಶಿಸಿದೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಅನುಷ್ಠಾನ ಸಂಸ್ಥೆ | ಅನುಷ್ಠಾನಾಧಿಕಾರಿ |
|---|---|---|---|
| 1 | ಬಾಗಲಕೋಟೆ | 1. ಅರಣ್ಯ ಇಲಾಖೆ<br>2. ತೋಟಗಾರಿಕೆ ಇಲಾಖೆ | 1. ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ವಿಭಾಗ, ಬಾಗಲಕೋಟೆ<br>2. ಉಪ ನಿರ್ದೇಶಕರು, ತೋಟಗಾರಿಕೆ ಇಲಾಖೆ, ಬಾಗಲಕೋಟೆ. |
| 2 | ಬೆಳಗಾಂ | 1. ಅರಣ್ಯ ಇಲಾಖೆ<br>2. ತೋಟಗಾರಿಕೆ ಇಲಾಖೆ | 1. ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ವಿಭಾಗ, ಬೆಳಗಾಂ<br>2. ಉಪ ನಿರ್ದೇಶಕರು, ತೋಟಗಾರಿಕೆ ಇಲಾಖೆ, ಬೆಳಗಾಂ |
| 3 | ಚಿತ್ರದುರ್ಗ | 1. ಅರಣ್ಯ ಇಲಾಖೆ | 1. ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ವಿಭಾಗ, |

| | | | |
|---|---|---|---|
| | | 2. ತೋಟಗಾರಿಕೆ ಇಲಾಖೆ | ಚಿತ್ರದುರ್ಗ<br>2. ಉಪ ನಿರ್ದೇಶಕರು, ತೋಟಗಾರಿಕೆ ಇಲಾಖೆ, ಚಿತ್ರದುರ್ಗ |
| 4 | ಧಾರವಾಡ | 1. ಅರಣ್ಯ ಇಲಾಖೆ<br>2. ತೋಟಗಾರಿಕೆ ಇಲಾಖೆ | 1. ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ವಿಭಾಗ, ಧಾರವಾಡ<br>2. ಉಪ ನಿರ್ದೇಶಕರು, ತೋಟಗಾರಿಕೆ ಇಲಾಖೆ, ಧಾರವಾಡ |
| 5 | ಹಾಸನ | 1. ಅರಣ್ಯ ಇಲಾಖೆ<br>2. ತೋಟಗಾರಿಕೆ ಇಲಾಖೆ | 1. ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ವಿಭಾಗ, ಹಾಸನ<br>2. ಉಪ ನಿರ್ದೇಶಕರು, ತೋಟಗಾರಿಕೆ ಇಲಾಖೆ, ಹಾಸನ |
| 6 | ತುಮಕೂರು | 1. ಅರಣ್ಯ ಇಲಾಖೆ<br>2. ತೋಟಗಾರಿಕೆ ಇಲಾಖೆ | 1. ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ವಿಭಾಗ, ತುಮಕೂರು<br>2. ಉಪ ನಿರ್ದೇಶಕರು, ತೋಟಗಾರಿಕೆ ಇಲಾಖೆ, ತುಮಕೂರು |
| 7 | ಉತ್ತರ ಕನ್ನಡ | 1. ಅರಣ್ಯ ಇಲಾಖೆ<br>2. ತೋಟಗಾರಿಕೆ ಇಲಾಖೆ | 1. ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ವಿಭಾಗ, ಉತ್ತರ ಕನ್ನಡ<br>2. ಉಪ ನಿರ್ದೇಶಕರು, ತೋಟಗಾರಿಕೆ ಇಲಾಖೆ, ಉತ್ತರ ಕನ್ನಡ |

1. ಅನುಷ್ಠಾನ ಸಂಸ್ಥೆಗಳು ಯೋಜನೆಯಡಿ ತಮ್ಮ ಇಲಾಖಾ ವತಿಯಿಂದ ಕೈಗೆತ್ತಿಕೊಳ್ಳಬಹುದಾದ ಕಾಮಗಾರಿಗಳನ್ನು ಯೋಜನೆಯ ಮಾರ್ಗಸೂಚಿಗಳನ್ವಯ ಸಂಬಂಧಪಟ್ಟ ಗ್ರಾಮ ಸಭೆಗಳಲ್ಲಿ ಪ್ರಸ್ತಾಪಿಸಿ ಗ್ರಾಮ ಸಭೆಗಳ ಶಿಫಾರಸ್ಸಿನೊಂದಿಗೆ ನಿಯಮಾನುಸಾರ ಸೂಕ್ತ ಅನುಮೋದನೆ ಪಡೆದು ಕಾಮಗಾರಿ ಗುಚ್ಚದಲ್ಲಿ ಸೇರಿಸತಕ್ಕದ್ದು.
2. ಅರಣ್ಯ ಮತ್ತು ತೋಟಗಾರಿಕೆ ಇಲಾಖೆಗಳ ಕಾಮಗಾರಿಗಳು ಋತುಮಾನಾಧಾರಿತ ಕಾಮಗಾರಿಗಳಾಗಿರುವುದರಿಂದ ಅಂತಹ ಕಾಮಗಾರಿಗಳನ್ನು ಗ್ರಾಮ ಪಂಚಾಯತಿಯವರು ಕೈಗೆತ್ತಿಕೊಂಡಿದ್ದರೆ ಗ್ರಾಮಸಭೆಯ ಮೂಲಕ ಗ್ರಾಮ ಪಂಚಾಯತಿಯಿಂದ ಕ್ರಿಯಾ ಯೋಜನೆಯನ್ನು ಅನುಮೋದಿಸತಕ್ಕದ್ದು. ಇದೇ ರೀತಿ ತಾಲ್ಲೂಕು ಪಂಚಾಯತಿ/ಜಿಲ್ಲಾ ಪಂಚಾಯತಿಯವರು ಕಾಮಗಾರಿಗಳನ್ನು ಕೈಗೆತ್ತಿಕೊಂಡಿದ್ದರೆ ಕ್ರಿಯಾಯೋಜನೆಗೆ ತಾಲ್ಲೂಕು ಪಂಚಾಯತಿ/ಜಿಲ್ಲಾ ಪಂಚಾಯತಿಯವರು ಅನುಮೋದನೆ ನೀಡತಕ್ಕದ್ದು.
3. ಸದರಿ ಅನುಮೋದಿತ ಕಾಮಗಾರಿಗಳ ಸಂಬಂಧ ಯೋಜನೆಯಡಿ ನೀಡಲಾಗಿರುವ ಅಧಿಕಾರಿಗಳನ್ವಯ ಕಾಮಗಾರಿ ಅಂದಾಜು ಪಟ್ಟಿಗಳನ್ನು ತಯಾರಿಸಿ ತಾಂತ್ರಿಕ ಮತ್ತು ಆಡಳಿತಾತ್ಮಕ ಮಂಜೂರಾತಿಯನ್ನು ಪಡೆದಿರತಕ್ಕದ್ದು.
4. ಯೋಜನೆಯಡಿ ಸಲ್ಲಿಸಲಾಗುವ ಉದ್ಯೋಗ ಬೇಡಿಕೆಗೆ ಅನುಗುಣವಾಗಿ ಗ್ರಾಮ ಪಂಚಾಯತಿಯ ಪಂಚಾಯತಿ ಅಭಿವೃದ್ಧಿ ಅಧಿಕಾರಿ ಇವರು ಸದರಿ ಇಲಾಖೆಗಳ ಅನುಮೋದಿತ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಕಾಮಗಾರಿಗಳನ್ನು ಹಂಚಿಕೆ ಮಾಡಿ ಅದಕ್ಕೆ ಅಗತ್ಯವಾಗಿ ಬೇಕಾಗಿರುವ NMR ಗಳನ್ನು MIS ಮೂಲಕ ಸಂಬಂಧಪಟ್ಟ ಅನುಷ್ಠಾನ ಸಂಸ್ಥೆಗಳಿಗೆ ವಿತರಿಸುವುದು.
5. ಅನುಷ್ಠಾನ ಸಂಸ್ಥೆಗಳಿಗೆ ಯೋಜನೆ ಅನುಷ್ಠಾನದಲ್ಲಿರುವ ಎಲ್ಲ ಪ್ರಕ್ರಿಯೆಗಳನ್ನು MIS ನಲ್ಲಿ ಅಳವಡಿಸಲು ಒಂದು ಪ್ರತ್ಯೇಕ login ಅವಕಾಶ ಕಲ್ಪಿಸಲಾಗಿರುತ್ತದೆ. ಸದರಿ login ಬಳಕೆ ಮಾಡಿಕೊಂಡು ಅನುಷ್ಠಾನ ಸಂಸ್ಥೆಗಳು ಗ್ರಾಮ ಪಂಚಾಯತಿಯ ಪಂಚಾಯತಿ ಅಭಿವೃದ್ಧಿ ಅಧಿಕಾರಿ ಇವರು ವಿತರಿಸಿರುವ NMR ಗಳನ್ನು ಪಡೆಯಬಹುದಾಗಿದೆ.
6. MIS ನಿಂದ ಪಡೆದ NMR ಗಳನ್ನು ಕಾಮಗಾರಿ ನಿರ್ವಹಣೆಯಲ್ಲಿ ಬಳಸಿದ ನಂತರ ಸದರಿ ಮಾಹಿತಿಯನ್ನು MIS ನಲ್ಲಿ ಭರ್ತಿ ಮಾಡಲು ನಂತರ ಕೂಲಿ ಪಾವತಿಗಾಗಿ wage list ಮುದ್ರಿಸಲು ಹಾಗು ಕೂಲಿ ಪಾವತಿ ಮಾಡುವ ಸಂಪೂರ್ಣ ಜವಾಬ್ದಾರಿ ಅನುಷ್ಠಾನ ಸಂಸ್ಥೆಯದಾಗಿರುತ್ತದೆ.
7. ಸದರಿ ಕಾಮಗಾರಿಗೆ ಅನುಮೋದಿತ ಅಂದಾಜು ಪಟ್ಟಿಯಂತೆ ಅಗತ್ಯವಾಗಿ ಬೇಕಾಗಿರುವ ಸಾಮಗ್ರಿಯನ್ನು ಕೇಂದ್ರ ಸರ್ಕಾರದ ಮಾರ್ಗಸೂಚಿಗಳನ್ವಯ ಖರೀದಿ ಮಾಡಿ ಕಾಮಗಾರಿಯಲ್ಲಿ ಬಳಸಲು ಮತ್ತು ಪೂರ್ಣ ಸಾಮಗ್ರಿ ವಿವರಗಳನ್ನು ಹಾಗೂ ಪಾವತಿ ವಿವರಗಳನ್ನು ಕಡ್ಡಾಯವಾಗಿ MIS ನಲ್ಲಿ ದಾಖಲಿಸುವುದು ಅನುಷ್ಠಾನ ಅಧಿಕಾರಿಯವರ ಜವಾಬ್ದಾರಿಯಾಗಿರುತ್ತದೆ.
8. ಸದರಿ ಕಾಮಗಾರಿಗಳಿಗೆ ಸಂಬಂಧಪಟ್ಟ ಹಣ ಪಾವತಿಗೆ ಮುನ್ನ ನಿಯಮಾನುಸಾರ ಅನುಮೋದಿತ ಅಂದಾಜು ಪಟ್ಟಿಯನ್ವಯ ಹಾಗೂ ಕಾಮಗಾರಿ ನಿರ್ವಹಣೆ ಅನುಸಾರ ಅಳತೆ ಪುಸ್ತಕದಲ್ಲಿ ದಾಖಲಿಸುವುದು ಹಾಗೂ ಧೃಢೀಕರಿಸುವುದರ ಜೊತೆಗೆ MIS ನಲ್ಲಿ ಸದರಿ ಮಾಹಿತಿಯನ್ನು ಭರ್ತಿ ಮಾಡುವುದು ಕಡ್ಡಾಯವಾಗಿರುತ್ತದೆ.
9. ಗ್ರಾಮ ಪಂಚಾಯತಿಯ ಪಂಚಾಯತಿ ಅಭಿವೃದ್ಧಿ ಅಧಿಕಾರಿ ಇವರು ಕಾಮಗಾರಿಯನ್ನು ಹಂಚಿಕೆ ಮಾಡಿ ಸದರಿ ಕಾಮಗಾರಿಗೆ NMR ವಿತರಣೆ ಮಾಡುವ ಸಂದರ್ಭದಲ್ಲಿ ಕಡ್ಡಾಯವಾಗಿ ಸದರಿ ಕಾಮಗಾರಿಯ ಅನುಷ್ಠಾನಕ್ಕಾಗಿ ಬೇಕಾಗಿರುವ ಅನುದಾನವನ್ನು ಅನುಷ್ಠಾನ ಸಂಸ್ಥೆಗಳಿಗೆ ಜಿಲ್ಲಾ ಕಾರ್ಯಕ್ರಮ ಅಧಿಕಾರಿ/ಕಾರ್ಯಕ್ರಮ ಅಧಿಕಾರಿಗಳು ಬಿಡುಗಡೆ ಮಾಡತಕ್ಕದ್ದು ಮತ್ತು ಸದರಿ ಮಾಹಿತಿಯನ್ನು MIS ನಲ್ಲಿ ದಾಖಲಿಸತಕ್ಕದ್ದು. (ತುರ್ತು ಸಂದರ್ಭಗಳಲ್ಲಿ ರಾಜ್ಯ ಸರ್ಕಾರವು ನೇರವಾಗಿ ಅನುದಾನ ಬಿಡುಗಡೆ ಮಾಡಲು ಕ್ರಮ ವಹಿಸಬಹುದಾಗಿರುತ್ತದೆ.)
10. ಅನುಷ್ಠಾನ ಸಂಸ್ಥೆಗಳು ಬಿಡುಗಡೆ ಮಾಡುವ ಪೂರ್ಣ ಅನುದಾನದ ಸ್ವೀಕೃತಿ ಹಾಗು ಸದರಿ ಅನುದಾನದಲ್ಲಿ ಭರಿಸಲಾಗುವ ವೆಚ್ಚ ಇತ್ಯಾದಿ ಮಾಹಿತಿಯನ್ನು ತಮ್ಮ login ಮೂಲಕವೇ MIS ನಲ್ಲಿ ಭರ್ತಿ ಮಾಡತಕ್ಕದ್ದು.

11. ಕಾಮಗಾರಿ ಪೂರ್ಣಗೊಳಿಸಿದ ಸಂಬಂಧ ಸೂಕ್ತ ಧೃಢಿಕರಣ ಹಾಗೂ ಕಾಮಗಾರಿ ಅನುಷ್ಠಾನದಲ್ಲಿ ನಿರ್ವಹಿಸಬೇಕಾದ ಪೂರ್ಣ ದಾಖಲಾತಿಗಳನ್ನು ಕಡ್ಡಾಯವಾಗಿ ಪ್ರತ್ಯೇಕ ಕಡತದಲ್ಲಿ ನಿರ್ವಹಿಸತಕ್ಕದ್ದು ಮತ್ತು ಯೋಜನಾ ಸಂಬಂಧ ಪರಿಶೀಲನೆಗಾಗಿ ಬರುವ ಅಧಿಕಾರಿಗಳಿಗೆ ತಪ್ಪದೇ ಸದರಿ ದಾಖಲಾತಿಗಳನ್ನು ಹಾಜರು ಪಡಿಸತಕ್ಕದ್ದು.
12. ಯೋಜನೆಯ ಅನುಷ್ಠಾನ ಸಂಬಂಧ ಆರ್ಥಿಕ ವರ್ಷ ಅಂತಿಮಗೊಂಡ ಕೂಡಲೇ Chartered Accountant ರವರಿಂದ ಆಡಿಟ್ ಮಾಡಿಸಿ ವರದಿಯನ್ನು ಸಂಬಂಧಪಟ್ಟ ಪಂಚಾಯತ್ ರಾಜ್ ಸಂಸ್ಥೆಗಳಿಗೆ ಸಲ್ಲಿಸತಕ್ಕದ್ದು.
13. ಕೇಂದ್ರ/ರಾಜ್ಯ ಸರ್ಕಾರವು ಯೋಜನಾ ಅನುಷ್ಠಾನ ಸಂಬಂಧ ಕಾಲಕಾಲಕ್ಕೆ ಹೊರಡಿಸಲಾಗುವ ನಿರ್ದೇಶನ/ಸೂಚನೆಗಳನ್ನು ಚಾಚೂ ತಪ್ಪದೇ ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ಎಸ್. ಪ್ರಸನ್ನಕುಮಾರ್**

ನಿರ್ದೇಶಕರು

ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ

ಹಾಗೂ ಪದ ನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಪಿ. ಆರ್. 553 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## WATER RESOURCES SECRETARIAT

**Sub :** According Administrative Approval to the Minor Irrigation Projects under Accelerated Irrigation Benefit Programme-Regarding.

**Read :** Letter No. CEMI(S)/TA-2/AE-2/AIBP/2011/1089, dt. 25.02.2011, from the Chief Engineer, Minor Irrigation South Zone, Bangalore.

**Preamble :**

As per the modified guidelines issued by the Government of India, Minor Irrigation schemes with potential of more than 50 hectares which serve tribal areas and drought prone areas in the non-special category states are eligible for inclusion under Accelerated Irrigation Benefit Programme (AIBP) effective from December 2006. Karnataka state is classified as one of the non-special category states. 81 taluks in the state are approved under Drought prone Area Programme (DPAP). Minor Irrigation schemes with potential more than 50 hectares and cost not exceeding Rs. 2.00 lakhs per Ha in these 81 taluks are eligible for inclusion under Accelerated Irrigation Benefit Programme (AIBP). Central Assistance will be in the form of Central Grant at 90% of the balance estimated cost of the project worked out after excluding the previous expenditure and considering the cost of the schemes up to Rs. 1.5 lakh per Ha. The remaining cost of the project will have to be borne by the State as state's share.

Government of Karnataka has identified new Minor Irrigation Schemes in these taluks for seeking Government of India approval under AIBP. Finance Department, Government of Karnataka has also approved the proposal of the Water Resources Department (Minor Irrigation) for according approval to such schemes. The Chief Engineer, Minor Irrigation South Zone in the letter read above has requested for according administrative approval to the estimates of the works proposed under AIBP. Accordingly the following scheme in DPAP taluk is being considered for according administrative approval. This proposal has been cleared by the technical committee in its meeting held on 21.02.2011.

| Sl. No. | Name of the Scheme | District | Taluk | Estimated cost | Potential planned in Ha. | Cost per Ha. |
|---|---|---|---|---|---|---|
| 1 | Detailed estimate for the excavation and construction of other allied works in Y.G. Gudda NTP | Ramanagar | Magadi | 645.00 | 410.00 | 121 |
| | Total | | | 645.00 | | |

**Government Order No. : SANEEYEE, 12 MASAVI (Tech) 2011 (14) Bangalore, Dated : 05-03-2011**

In view of the above, the Administrative approval is hereby accorded for taking up the above work with an estimated cost totaling to Rs 645.00 lakhs (Rupees Six hundred and forty five lakhs only) subject to the following conditions.

1. Implementation of these projects should be taken up only after receipt of necessary approval from the GOI.
2. The projects are to be completed with in a period of 2 years after receipt of approval of Government of India to these schemes.
3. The funding of the scheme is in the ratio of 90:10 between the Central Govt and State Govt.
4. The Central share is in the form of grant to the state.
5. The projects will be implemented by the Water Resources Department (Minor Irrigation) as per the KTPP act.
6. The implementation of the project shall adhere to the terms and conditions of the guidelines issued by the GOI.
7. The implementation of the project shall be as per the required technical specifications and financial specifications as per the approved DPRs

8. Water users association shall be formed for post construction maintenance and the scheme shall be handed over to the same after its construction for the O&M.

This order is issued with the concurrence of Finance Department in their note No. PWD-890-FC-1/2009 dated 09.12.2009.

By Order and in the name of the Governor of Karnataka
**Rudramurthy**
Ex-officio Under Secretary to Government
Water Resources Department (Minor Irrigation)

P.R. 679

## WATER RESOURCES SECRETARIAT

**Sub :** According Administrative Approval to the Minor Irrigation Projects under Accelerated Irrigation Benefit Programme-Regarding.

**Read:** Letter No. CEMI(S)/TA-2/AE-2/AIBP/2011/1089, dt. 25.02.2011, from the Chief Engineer, Minor Irrigation South Zone, Bangalore.

**Preamble :**

As per the modified guidelines issued by the Government of India, Minor Irrigation schemes with potential of more than 50 hectares which serve tribal areas and drought prone areas in the non-special category states are eligible for inclusion under Accelerated Irrigation Benefit Programme (AIBP) effective from December 2006. Karnataka state is classified as one of the non-special category states. 81 taluks in the state are approved under Drought prone Area Programme (DPAP). Minor Irrigation schemes with potential more than 50 hectares and cost not exceeding Rs. 2.00 lakhs per Ha in these 81 taluks are eligible for inclusion under Accelerated Irrigation Benefit Programme (AIBP). Central Assistance will be in the form of Central Grant at 90% of the balance estimated cost of the project worked out after excluding the previous expenditure and considering the cost of the schemes up to Rs. 1.5 lakh per Ha. The remaining cost of the project will have to be borne by the State as state's share.

Government of Karnataka has identified new Minor Irrigation Schemes in these taluks for seeking Government of India approval under AIBP. Finance Department, Government of Karnataka has also approved the proposal of the Water Resources Department (Minor Irrigation) for according approval to such schemes. The Chief Engineer, Minor Irrigation South Zone in the letter read above has requested for according administrative approval to the estimates of the works proposed under AIBP. Accordingly the following scheme in DPAP taluk is being considered for according administrative approval. This proposal has been cleared by the technical committee in its meeting held on 21.02.2011.

**Head of Account: 4702-00-101-1-10-139 AIBP Major Works**

Amount Rs. In Lakhs

| Sl. No. | Name of the Project | District | Taluk | Estimated cost | Potential planned in Ha. | Cost per Ha. |
|---|---|---|---|---|---|---|
| 1 | Construction of Barrage cum pickup across Kallambella feeder halla near kataveeranahalli village | Tumkur | Sira | 550.00 | 280.00 | 1.96 |
| | **Total** | | | **550.00** | | |

**Government Order No. : SANEEYEE, 12 MASAVI (Tech) 2011 (13) Bangalore, Dated : 05-03-2011**

In view of the above, the Administrative approval is hereby accorded for taking up the above work with an estimated cost totaling to Rs 550.00 lakhs (Rupees five hundred and fifty lakhs only) subject to the following conditions.

1. Implementation of these projects should be taken up only after receipt of necessary approval from the GOI.
2. The projects are to be completed with in a period of 2 years after receipt of approval of Government of India to these schemes.
3. The funding of the scheme is in the ratio of 90:10 between the Central Govt and State Govt.
4. The Central share is in the form of grant to the state.
5. The projects will be implemented by the Water Resources Department (Minor Irrigation) as per the KTPP act.
6. The implementation of the project shall adhere to the terms and conditions of the guidelines issued by the GOI.
7. The implementation of the project shall be as per the required technical specifications and financial specifications as per the approved DPRs
8. Water users association shall be formed for post construction maintenance and the scheme shall be handed over to the same after its construction for the O&M.

This order is issued with the concurrence of Finance Department in their note No. PWD-890-FC-1/2009 dated 09.12.2009.

By Order and in the name of the Governor of Karnataka
**Rudramurthy**
Ex-officio Under Secretary to Government
Water Resources Department (Minor Irrigation)

P.R. 680

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಭಾರತ ಸಂವಿಧಾನದ ಅನುಚ್ಛೇದ 16(4)ರಡಿ ಕರ್ನಾಟಕ ಪಶು ವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದ ಪ್ರಾಧ್ಯಾಪಕರು, ಸಹ ಪ್ರಾಧ್ಯಾಪಕರುಗಳು ಹಾಗೂ ಸಹಾಯಕ ಪ್ರಾಧ್ಯಾಪಕರುಗಳ ಹುದ್ದೆಗಳ ನೇರ ನೇಮಕಾತಿಯಲ್ಲಿ ಮೀಸಲಾತಿ ಕಲ್ಪಿಸುವ ಬಗ್ಗೆ.

**ಓದಲಾಗಿದೆ :** (1) ದಿ: 20–6–1995ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 08 ಸೆಹಿಮ 95.

(2) ದಿ: 7–9–1998ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 27 ಸೆಹಿಮ 97.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ 20–6–1995ರ ಸರ್ಕಾರಿ ಆದೇಶದಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಇತರ ಹಿಂದುಳಿದ ವರ್ಗಗಳಿಗೆ ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ಮಾಡುವ ನೇರನೇಮಕಾತಿಯಲ್ಲಿ ಪರಿಷ್ಕೃತ ಮೀಸಲಾತಿಯನ್ನು ಜಾರಿಗೆ ತರಲಾಗಿದೆ.

ಮೇಲೆ(2)ರಲ್ಲಿ ಓದಲಾದ ದಿನಾಂಕ 7–9–1998ರ ಸರ್ಕಾರಿ ಆದೇಶದಲ್ಲಿ ರಾಜ್ಯ ಸಿವಿಲ್ ಸೇವೆಗಳಲ್ಲಿ ಒಂದೇ ಹುದ್ದೆ ಇರುವ ವೃಂದಗಳಲ್ಲಿ, ನೇರ ನೇಮಕಾತಿಗಾಗಲೀ ಅಥವಾ ಮುಂಬಡ್ತಿಗಾಗಲೀ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಇತರ ಹಿಂದುಳಿದ ವರ್ಗಗಳಿಗಾಗಿ ಭಾರತ ಸಂವಿಧಾನದ ಅನುಚ್ಛೇದ 16ರಡಿಯಲ್ಲಿ ಹೊರಡಿಸಿದ ಮೀಸಲಾತಿ ಆದೇಶಗಳನ್ನು ಅನ್ವಯಿಸತಕ್ಕದ್ದಲ್ಲವೆಂದಿರುವ ದಿನಾಂಕ 16–11–1995ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 21 ಸೆಹಿಮ 90ರನ್ವಯ ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಲಾಗಿದೆ.

ಕರ್ನಾಟಕ ಪಶು ವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದ ಪ್ರಾಧ್ಯಾಪಕರು (Professor), ಸಹ ಪ್ರಾಧ್ಯಾಪಕರು (Associate Professor) ಹಾಗೂ ಸಹಾಯಕ ಪ್ರಾಧ್ಯಾಪಕರ (Assistant Professor) ಹುದ್ದೆಗಳನ್ನು ನೇರನೇಮಕಾತಿ ಮೂಲಕ ಭರ್ತಿ ಮಾಡುವಾಗ ಆಯಾಯಾ ವೃಂದವಾರು ಹುದ್ದೆಗಳನ್ನು ಒಟ್ಟುಗೂಡಿಸಿ ದಿನಾಂಕ 20–6–1995ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 8 ಸೆಹಿಮ 95ರಲ್ಲಿ ನಿಗದಿಪಡಿಸಲಾದ ನೇರ ಮೀಸಲಾತಿ ರೋಸ್ಟರನ್ನು ಹಾಗೂ ಚಾಲ್ತಿಯಲ್ಲಿರುವ ಸಮತಳ ಮೀಸಲಾತಿ ಆದೇಶವನ್ನು ಅನ್ವಯಿಸಿ ನೇಮಕಾತಿ ಮಾಡುವ ಪ್ರಸ್ತಾವನೆಯನ್ನು ಸರ್ಕಾರ ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 01 ಸೆಹಿಮ 2011 ಬೆಂಗಳೂರು, ದಿನಾಂಕ 9ನೇ ಮಾರ್ಚ್ 2011**

ಕರ್ನಾಟಕ ಪಶು ವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದ ಪ್ರಾಧ್ಯಾಪಕರು, ಸಹ ಪ್ರಾಧ್ಯಾಪಕರು ಹಾಗೂ ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ನೇರ ನೇಮಕಾತಿಯ ಮುಖಾಂತರ ಭರ್ತಿ ಮಾಡುವಾಗ ವಿಷಯವಾರು ವಿಂಗಡಣೆ ಮಾಡದೆ ಆಯಾಯಾ ವೃಂದವಾರು (ಅಂದರೆ ಪ್ರಾಧ್ಯಾಪಕರ ವೃಂದ, ಸಹ ಪ್ರಾಧ್ಯಾಪಕರ ವೃಂದ ಹಾಗೂ ಸಹಾಯಕ ಪ್ರಾಧ್ಯಾಪಕರ ವೃಂದ ಎಂದು ಪರಿಗಣಿಸಿ) ಹುದ್ದೆಗಳನ್ನು ಒಟ್ಟುಗೂಡಿಸಿ ದಿನಾಂಕ 20–6–1995ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 8 ಸೆಹಿಮ 95ರಲ್ಲಿ ನಿಗದಿಪಡಿಸಲಾದ ನೇರ ಮೀಸಲಾತಿ ರೋಸ್ಟರನ್ನು ಹಾಗೂ ಚಾಲ್ತಿಯಲ್ಲಿರುವ ಸಮತಳ ಮೀಸಲಾತಿ ಆದೇಶವನ್ನು ಅನ್ವಯಿಸಿ ಅಭ್ಯರ್ಥಿಗಳ ಅಂತರ ಅರ್ಹತೆ (Interse merit) ಯಾಧಾರದ ಮೇಲೆ ನೇಮಕಾತಿ ಮಾಡುವಂತೆ ನಿರ್ದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 681

**ದೇವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾ ನಿಯಮಗಳು–1)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಅತ್ಯುತ್ತಮ ಪ್ರಗತಿ ಸಾಧಿಸಿದ ನಾಗರೀಕ ಸೇವಾ ಸಿಬ್ಬಂದಿಗೆ ರಾಜ್ಯ ಪ್ರಶಸ್ತಿ ನೀಡುವ ಬಗ್ಗೆ ವಿಶೇಷ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ :**

1. ದಿನಾಂಕ: 30.8.95ರ ಸರ್ಕಾರದ ಆದೇಶ ಸಂ: ಸಿಆಸುಇ 126 ಎಎಆರ್ 95.
2. ದಿನಾಂಕ: 21.5.1998ರಂದು ಭಾರತ ಸರ್ಕಾರದ ಮಿನಿಸ್ಟ್ರಿ ಆಫ್ ಪರ್ಸನಲ್, ಪಬ್ಲಿಕ್ ಗ್ರಿವೆನ್ಸ್ ಅಂಡ್ ಪೆನ್ಷನ್ಸ್‌ರವರಿಂದ ಹೊರಡಿಸಲಾದ ಅಧಿಕೃತ ಜ್ಞಾಪನದ ಸಂ: 33011/1/97 ಓ ಅಂಡ್ ಎಂ.
3. ದಿನಾಂಕ: 26.7.2002ರ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಟಿಪ್ಪಣಿ ಸಂ.: ಸಿಎಸ್ 3413/02.
4. ದಿನಾಂಕ: 19.08.2010ರ ಭಾರತ ಸರ್ಕಾರದ ಕಛೇರಿ ಜ್ಞಾಪನ ಸಂ: 33011/1/2005 ಓ ಅಂಡ್ ಎಂ.
5. ದಿನಾಂಕ: 8.7.2010ರ ಕರ್ನಾಟಕ ಸರ್ಕಾರದ ಆದೇಶ ಸಿಆಸುಇ 92 ಇಆಸು 2009.
6. ದಿನಾಂಕ: 13.08.2003ರ ಕರ್ನಾಟಕ ಸರ್ಕಾರದ ಆದೇಶ ಸಂ. ಸಿಆಸುಇ 34 ಇಆಸು 2002.

**ಪ್ರಸ್ತಾವನೆ:**

ಉಲ್ಲೇಖ (1)ರಲ್ಲಿ ಓದಲಾದ ದಿನಾಂಕ: 30.8.1995ರ ಸರ್ಕಾರದ ಆದೇಶದಲ್ಲಿ, ಅಸಾಧಾರಣ ಪ್ರತಿಭೆಯುಳ್ಳ ನಾಗರೀಕ ಸೇವಾ ಸಿಬ್ಬಂದಿಗೆ ರಾಜ್ಯ ಪ್ರಶಸ್ತಿ ನೀಡುವ ವಿಷಯವನ್ನು ಕುರಿತು ವಿಶೇಷ ಯೋಜನೆಯನ್ನು ತಯಾರಿಸಿ ಸೂಕ್ತ ಶಿಫಾರಸ್ಸುಗಳನ್ನು ನೀಡಲು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಕಾರ್ಯದರ್ಶಿಗಳ ಉನ್ನತ ಮಟ್ಟದ ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಯು ತನ್ನ ವರದಿಯಲ್ಲಿ, ಮೂರು ಹಂತಗಳಲ್ಲಿ ಅಂದರೆ ಜಿಲ್ಲೆ, ಉಪ ವಿಭಾಗೀಯ ಹಾಗೂ ತಾಲ್ಲೂಕು ಮಟ್ಟದಲ್ಲಿ, ವೈಯಕ್ತಿಕ, ಸಾಧನೆಯಲ್ಲಿ ಅಸಾಧಾರಣ ಪ್ರತಿಭೆ ತೋರಿಸಿದವರಿಗೆ ಪ್ರಶಸ್ತಿ

ನೀಡಬಹುದೆಂದು ಸಲಹೆ ಮಾಡಿತ್ತು. ಸಮಿತಿಯ ಶಿಫಾರಸ್ಸುಗಳನ್ನು ಪರಿಗಣಿಸಿದ ನಂತರ, ಈ ತರಹದ ಯೋಜನೆಯು ಕಾರ್ಯಸಾಧುವಲ್ಲವೆಂದು ತೀರ್ಮಾನಿಸಿ, ಈ ಯೋಜನೆಯನ್ನು ಕೈಗೆತ್ತಿಕೊಳ್ಳಲಿಲ್ಲ.

ಉಲ್ಲೇಖ (2)ರಲ್ಲಿ ಓದಲಾದ ದಿನಾಂಕ: 21.5.1998ರ ಅಧಿಕೃತ ಜ್ಞಾಪನದಲ್ಲಿ ಕೇಂದ್ರ ಸರ್ಕಾರವು 1964ರಲ್ಲಿದ್ದು, ತನ್ನ ಯೋಜನೆಯನ್ನು ಸೂಕ್ತವಾಗಿ ಮಾರ್ಪಾಡು ಮಾಡಿ, ಅಸಾಧಾರಣ ಪ್ರತಿಭೆ ತೋರಿಸಿದ ತನ್ನ ನೌಕರರಿಗೆ ಪ್ರಶಸ್ತಿ/ಪ್ರೋತ್ಸಾಹಧನವನ್ನು ಮಂಜೂರು ಮಾಡುವ ಬಗ್ಗೆ ಮಾರ್ಗಸೂಚಿಗಳನ್ನು ಹೊರಡಿಸಿತ್ತು.

ಉಲ್ಲೇಖ (3)ರಲ್ಲಿ ಓದಲಾದ ದಿನಾಂಕ: 26.7.2002ರ ಟಿಪ್ಪಣಿಯಲ್ಲಿ, ತಮ್ಮ ಕೆಲಸ ಕಾರ್ಯಗಳಲ್ಲಿ ಅಸಾಧಾರಣ ಪ್ರತಿಭೆ ತೋರಿಸಿದ ಅಧಿಕಾರಿಗಳಿಗೆ ಪ್ರಶಸ್ತಿ/ಪ್ರೋತ್ಸಾಹ ಧನವನ್ನು ನೀಡುವ ಸಲುವಾಗಿ ಮಾರ್ಗಸೂಚಿಗಳನ್ನು ರಚಿಸಲು ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡ ಸಮಿತಿಯೊಂದನ್ನು ಸರ್ಕಾರದ ಮುಖ್ಯ ಕಾರ್ಯದರ್ಶಿಯವರು ರಚಿಸಿದ್ದರು.

1. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ – ಅಧ್ಯಕ್ಷರು
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಪ್ರಧಾನ ಕಾರ್ಯದರ್ಶಿ, ವಾ ಮತ್ತು ಕೈ ಇಲಾಖೆ – ಸದಸ್ಯರು
3. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ – ಸದಸ್ಯರು
4. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಆಸು) – ಸದಸ್ಯರು (ಸಮಾವೇಶಕರು)

ತಮ್ಮ ಕೆಲಸ ಕಾರ್ಯಗಳಲ್ಲಿ ಅಸಾಧಾರಣ ಪ್ರತಿಭೆ ತೋರಿಸಿದ ಸರ್ಕಾರಿ ನೌಕರರಿಗೆ ಪ್ರಶಸ್ತಿ/ಪ್ರೋತ್ಸಾಹಧನ ನೀಡುವ ವಿಚಾರದಲ್ಲಿ ಸಮಿತಿಯು ತಾನು ಸಲಹೆ ಮಾಡಿದಂತೆ ಮಾರ್ಗಸೂಚಿಗಳನ್ನು ರಚಿಸಲು ಶಿಫಾರಸ್ಸು ಮಾಡಿತ್ತು.

ಉಲ್ಲೇಖ (4)ರಲ್ಲಿ ದಿನಾಂಕ: 19.08.2010ರ ಭಾರತ ಸರ್ಕಾರದ ಕಛೇರಿ ಜ್ಞಾಪನದಲ್ಲಿ ಕೇಂದ್ರ ಸರ್ಕಾರದ ನೌಕರರಿಗೆ ಹಾಗೂ ಸಾರ್ವಜನಿಕರಿಗೆ ನೀಡಲಾಗುತ್ತಿದ್ದ ಪರಿಷ್ಕೃತ ಪ್ರಶಸ್ತಿ ಯೋಜನೆಯನ್ನು ರದ್ದುಪಡಿಸಲಾಗಿದೆ.

ಉಲ್ಲೇಖ (5)ರ ಸರ್ಕಾರಿ ಆದೇಶದಲ್ಲಿ ಸೃಜನಾತ್ಮಕವಾದ ಹಾಗೂ ಪರಿಣಾಮಕಾರಿಯಾದ ಯೋಜನೆಗಳನ್ನು ಸರ್ಕಾರದ ಇಲಾಖೆಗಳು ಹಾಗೂ ಸಂಸ್ಥೆಗಳಲ್ಲಿ ಜಾರಿಗೆ ತರುವ ಸಲುವಾಗಿ 'ಚಾಲೆಂಜ್ ಫಂಡ್' ಯೋಜನೆಯನ್ನು ರೂಪಿಸಲಾಗಿದೆ.

ಉಲ್ಲೇಖ (6)ರ ಸರ್ಕಾರಿ ಆದೇಶದಲ್ಲಿ ಅಸಾಧಾರಣ ಪ್ರತಿಭೆ ತೋರಿಸಿದ ನಾಗರೀಕ ಸೇವಾ ಸಿಬ್ಬಂದಿಗೆ ಪ್ರಶಸ್ತಿ/ಪ್ರೋತ್ಸಾಹಧನ ನೀಡುವ ಬಗ್ಗೆ ಮಾರ್ಗಸೂಚಿಗಳನ್ನು ನೀಡಲಾಗಿತ್ತು.

**ಸರ್ಕಾರದ ಆದೇಶದ ಸಂ: ಸಿಆಸುಇ 63 ಇಆಸು 2008, ಬೆಂಗಳೂರು ದಿನಾಂಕ: 04.03.2011**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದಲ್ಲೂ, ಅತ್ಯುತ್ತಮ ಪ್ರಗತಿ ಸಾಧಿಸಿದ ನಾಗರೀಕ ಸೇವಾ ಸಿಬ್ಬಂದಿಗಳಿಗೆ ರಾಜ್ಯ ಪ್ರಶಸ್ತಿ ನೀಡುವ ಯೋಜನೆಯನ್ನು ರದ್ದುಪಡಿಸಲಾಗಿದೆ. ಹಾಗೂ ದಿನಾಂಕ: 13.8.2003 ಸರ್ಕಾರಿ ಆದೇಶ ಸಂ: ಸಿಆಸುಇ 34 ಇಆಸು 2002ರನ್ನು ಹಿಂತೆಗೆದುಕೊಳ್ಳಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಲ್.ಎಸ್. ಚಂದ್ರಶೇಖರ ರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಆಸು–ತರಬೇತಿ)

ಪಿ.ಆರ್. 682

## HORTICULTURE SECRETARIAT

**Sub :** "Centrally Sponsored Scheme on Micro Irrigation" – Release of funds-reg.

**Read :** (1) G.O. No. HCD 92 HPP 2010 dated 12.08.2010.
(2) G.O. No. HCD 92 HPP 2010 dated 02.09.2010.
(3) G.O. No. HCD 92 HPP 2010 dated 06.12.2010.
(4) Director of Horticulture letter No. ತೋಇ/ತೋಜಂನಿಹನೀ/ಸತೋಅ–1/8/2010–11 dated 22.02.2011.

**Preamble :**

In the Government Order read at (1) above administrative approval has been accorded for the Implementation of the "Drip Irrigation – special subsidy for horticulture crops" Head of Account 2401-00-108-2-30 as a district sector scheme during the year 2010-11 on Mission Mode. An amount of Rs. 387.50 lakhs has been released towards the State share out of Rs. 1550.00 lakhs available in State sector under the said Head of Account during 2010-11.

2. Further, in the Government Orders read at (2) and (3) above an amount of Rs. 1162.50 lakhs and Rs. 613.20 lakhs have been released towards the State share.

3. The Director of Horticulture in his letter read at (4) above has informed that Government of India has so far released an amount of Rs. 54.75 lakhs and the State Government had to release Rs. 4790. 63 lakhs towards the matching State share. Out of this an amount of Rs. 1030.55 lakhs under Zilla Panchayat sector and Rs. 2682.45 lakhs under State sector totaling to Rs. 3713.00 lakhs has been released so far. Thus, the State Government is yet to release the matching State share of Rs. 1077.63 lakhs. An amount of Rs. 793.25 lakhs has been provided under the Head of Account 2401-00-108-2-30-059 State plan in the Supplementary Estimates – II. He has requested to release the matching State share.

4. The request of the Director of Horticulture has been examined and hence this order.

**Government Order No. : HCD 92 HPP 2010 Bangalore, Dated : 05-03-2011**

Government is pleased to release to the Director of Horticulture an amount of Rs. 793.25 lakhs (Rupees Seven Hundred and Ninety Three Lakhs and Twenty Five Thousand Only) towards the State share for "Centrally Sponsored Scheme on Micro Irrigation" under the Head of Account 2401-00-108-2-30-059 in the State sector during the year 2010-11.

2. This order issues with the concurrence of Internal Financial Advisor, Agriculture, Horticulture and Animal Husbandry Department vide Note No. ಕೃತೋಇ 30 ಆಂಆಸ 2010 dated 03.03.2011.

By Order and in the name of the Governor of Karnataka

**B.C. Prakash**

Under Secretary to Government

Horticulture Department.

P.R. 683

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ಮನವರ್ತೆ ಕಾವಲ್ ಸ.ನಂ. 12ರಲ್ಲಿ 4.11 ಎಕರೆ ಜಮೀನನ್ನು ರಾಷ್ಟ್ರೀಯ ಆಯುರ್ವೇದ ಆಹಾರ ವಿಜ್ಞಾನ ಸಂಶೋಧನೆ ಸಂಸ್ಥೆಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1) ಸಹಾಯಕ ನಿರ್ದೇಶಕರು, ರಾಷ್ಟ್ರೀಯ ಆಯುರ್ವೇದ ಆಹಾರ ವಿಜ್ಞಾನ ಸಂಶೋಧನಾ ಸಂಸ್ಥೆ ಇವರು ಸರ್ಕಾರಕ್ಕೆ ಸಲ್ಲಿಸಿದ ಮನವಿ ಸಂಖ್ಯೆ: F 1-4/NADRI/BNI/BLDG/09-10/1079, ದಿ: 29.03.2010.

2) ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ರವರ ಪತ್ರ ಸಂಖ್ಯೆ: ಎಲ್ಎನ್‌ಡಿ/ ಸಿಆರ್/42/10–11, ದಿ: 22.07.2010.

**ಪ್ರಸ್ತಾವನೆ:**

ಸಹಾಯಕ ನಿರ್ದೇಶಕರು, ರಾಷ್ಟ್ರೀಯ ಆಯುರ್ವೇದ ಆಹಾರ ವಿಜ್ಞಾನ ಸಂಶೋಧನಾ ಸಂಸ್ಥೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿ: 29.03.2010ರಂದು ಸರ್ಕಾರಕ್ಕೆ ಸಲ್ಲಿಸಿದ ಮನವಿಯಲ್ಲಿ ಕೇಂದ್ರೀಯ ಆಯುರ್ವೇದ ಮತ್ತು ಸಿದ್ಧಾ ಸಂಶೋಧನಾ ಪರಿಷತ್, ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಲಯ, ಆಯುಷ್ ವಿಭಾಗದ ಅಡಿಯಲ್ಲಿ ಇರುವಂತಹ ಸ್ವಾಯತ್ತ ಸಂಸ್ಥೆಯಾಗಿದ್ದು, ಈಗ ರಾಷ್ಟ್ರೀಯ ಆಯುರ್ವೇದ ಆಹಾರ ವಿಜ್ಞಾನ ಸಂಶೋಧನಾ ಸಂಸ್ಥೆ ಎಂದು ಪುನರ್ ನಾಮಕರಣಗೊಂಡಿದ್ದು, ಈ ಸಂಸ್ಥೆಯು ಆಯುರ್ವೇದದಲ್ಲಿ ಉನ್ನತ ಮಟ್ಟದ ಸಂಶೋಧನೆಯ ಮೂಲಕ ಕಾರ್ಯ ನಿರ್ವಹಿಸುತ್ತಿದ್ದು, ದೊಡ್ಡ ಪ್ರಮಾಣದ ಸಂಶೋಧನೆ ಮತ್ತು ಆಸ್ಪತ್ರೆ ನಿರ್ಮಾಣಕ್ಕೆ ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ಮನವರ್ತೆ ಕಾವಲ್ ಸ.ನಂ. 12ರಲ್ಲಿ 4.11 ಎಕರೆ ಜಮೀನನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿ: 22.07.2011ರ ಪತ್ರದಲ್ಲಿ ಸಲ್ಲಿಸಿದ ಪ್ರಸ್ತಾವನೆಯನುಸಾರ ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ಮನವರ್ತೆ ಕಾವಲ್ ಸ.ನಂ. 12ರಲ್ಲಿ 129.31 ಎಕರೆ ಜಮೀನಿದ್ದು, ಕುಂಪಣಿ ಕಾವಲ್ ಜಮೀನೆಂದು ವರ್ಗೀಕರಣವಾಗಿರುತ್ತದೆ. ಈ ಪೈಕಿ 122.20 ಎಕರೆ ಜಮೀನು ರೈತರಿಗೆ ದರಖಾಸ್ತು ಮೂಲಕ ವಿಲೇವಾರಿಯಾಗಿದ್ದು, ಬೆಂಗಳೂರು ನಗರ ನೀರು ಸರಬರಾಜು ಮಂಡಳಿ ಮತ್ತು ರಸ್ತೆಗೆ 3.00 ಎಕರೆ ಜಮೀನು ವಿಲೇವಾರಿಯಾಗಿದ್ದು, 4.11 ಎಕರೆ ಜಮೀನು ಮಾತ್ರ ಖಾಲಿ ಇರುತ್ತದೆ. ಪ್ರಶ್ನಿತ ಜಮೀನು ಸಿ.ಡಿ.ಪಿ.ಯಂತೆ ವ್ಯವಸಾಯ ವಲಯದಲ್ಲಿರುತ್ತದೆ. ಸದರಿ ಜಮೀನಿನ ಮಾರ್ಗಸೂಚಿ ಬೆಲೆ ಪ್ರತಿ ಎಕರೆಗೆ ರೂ. 40 ಲಕ್ಷ ಹಾಗೂ ಮಾರುಕಟ್ಟೆ ಬೆಲೆ ಪ್ರತಿ ಎಕರೆಗೆ ರೂ. 60 ಲಕ್ಷ ಹಾಗೂ ಸದರಿ ಜಮೀನು ಬಿಬಿಎಂಪಿ ವ್ಯಾಪ್ತಿಗೆ ಒಳಪಟ್ಟಿದೆ ಎಂದು ತಿಳಿಸಿರುತ್ತಾರೆ. ಸದರಿ ಜಮೀನನ್ನು ಕೆ.ಐ.ಎ.ಡಿ.ಬಿ.ಯು ಭೂ ಸ್ವಾಧೀನ ಪಡಿಸಿಕೊಳ್ಳಲು ಕಲಂ 28(1)ರಂತೆ ಪ್ರಾಥಮಿಕ ಅಧಿಸೂಚನೆಯನ್ನು ಹೊರಡಿಸಿದ್ದು, ಈವರೆಗೆ ಅಂತಿಮ ಅಧಿಸೂಚನೆ ಹೊರಡಿಸಿಲ್ಲವೆಂದು ತಿಳಿಸಿರುತ್ತಾರೆ. ಬಿ.ಎಂ.ಐ.ಸಿ.ಎ.ಪಿ.ಎ.ಯು ಈ ಜಮೀನು ಮಾಸ್ಟರ್ ಪ್ಲಾನ್ ಪ್ರಕಾರ ವ್ಯವಸಾಯ ವಲಯದಲ್ಲಿದ್ದು, ಈ ವಲಯದಲ್ಲಿನ ಜಮೀನನ್ನು ಆಯುಷ್ ಸಂಸ್ಥೆಗೆ ಮಂಜೂರು ಮಾಡಲು ಅವಕಾಶವಿಲ್ಲವೆಂದು ತಿಳಿಸಿರುತ್ತಾರೆ. ಆದರೆ ಸಿಡಿಪಿ ವಲಯದ permissible activities ಅಡಿಯಲ್ಲಿ ಸಾರ್ವಜನಿಕ ಆರೋಗ್ಯಕ್ಕೆ ಸಂಬಂಧಿಸದ ಚಟುವಟಿಕೆಗಳನ್ನು ಹಮ್ಮಿಕೊಳ್ಳಲು ಅವಕಾಶವಿದ್ದು, ಈ ಸಂಸ್ಥೆಯು ರಾಷ್ಟ್ರೀಯ ಆರೋಗ್ಯ ಸಂಸ್ಥೆಯಾಗಿರುವುದರಿಂದ ರಾಜ್ಯದಲ್ಲಿ ಈ ಸಂಸ್ಥೆಯನ್ನು ಉಳಿಸಿಕೊಳ್ಳುವ ದೃಷ್ಟಿಯಿಂದ ಈ ಸಂಸ್ಥೆಗೆ ಜಮೀನು ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಕೇಂದ್ರ ಸರ್ಕಾರಿ ಸಂಸ್ಥೆಗೆ ಮಾರ್ಗಸೂಚಿ ಬೆಲೆಯ ಆಧಾರದ ಮೇಲೆ ಮಂಜೂರು ಮಾಡಲು ಅವಕಾಶವಿಲ್ಲ. ಆದರೆ ಇದು ಕೇಂದ್ರ ಸರ್ಕಾರದ ಆಯುರ್ವೇದ ಸಂಶೋಧನಾ ಸಂಸ್ಥೆಯಾಗಿದ್ದು, ಇಂಥಹ ಸಂಸ್ಥೆಯು ಬಂದಲ್ಲಿ ನಮ್ಮ ರಾಜ್ಯದಲ್ಲಿಯ ಆಯುರ್ವೇದ ವ್ಯವಸ್ಥೆಯ ಆಧುನೀಕರಣ ಮತ್ತು ಅಭಿವೃದ್ಧಿಗೆ ಅನುಕೂಲವಾಗುತ್ತದೆಂಬ ದೃಷ್ಟಿಯಿಂದ ಕರ್ನಾಟಕ ಭೂ ಮಂಜೂರಾತಿಗಳ ನಿಯಮಗಳ ನಿಯಮ 27ರಲ್ಲಿನ ಅಧಿಕಾರವನ್ನು ಚಲಾಯಿಸಿ ಮಾರ್ಗಸೂಚಿ ದರ ವಿಧಿಸಿ ಮಂಜೂರು ಮಾಡಲು ನಿರ್ಣಯಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 327 ಎಲ್‌ಜಿಬಿ 2010, ಬೆಂಗಳೂರು, ದಿನಾಂಕ 04.03.2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಭೂ ಮಂಜೂರಾತಿಗಳ ನಿಯಮಗಳ ನಿಯಮ 1969ರ 27ರಲ್ಲಿನ ಅಧಿಕಾರವನ್ನು ಚಲಾಯಿಸಿ, ಮಾರ್ಗಸೂಚಿ ದರದ ಶೇ. 50ರಷ್ಟು ದರ ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ, ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ಮನವರ್ತೆ ಕಾವಲ್ ಸ.ನಂ. 12ರಲ್ಲಿ 4.11 ಎಕರೆ ಸರ್ಕಾರಿ ಜಮೀನನ್ನು ರಾಷ್ಟ್ರೀಯ ಆಯುರ್ವೇದ ಆಹಾರ ವಿಜ್ಞಾನ ಸಂಶೋಧನಾ ಸಂಸ್ಥೆಗೆ ದೊಡ್ಡ ಪ್ರಮಾಣದ ಸಂಶೋಧನೆ ಮತ್ತು ಆಸ್ಪತ್ರೆ ನಿರ್ಮಾಣಕ್ಕಾಗಿ ಮಂಜೂರು ಮಾಡಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೀತಾ ರಮೇಶ್**

ಸರ್ಕಾರದ ಉಪ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ.ಮಂ ಮತ್ತು ಭೂ ಕಂ).

ಪಿ.ಆರ್. 684

## ಶಿಕ್ಷಣ ಸಚಿವಾಲಯ

**ವಿಷಯ :** ಚಿಕ್ಕಬಳ್ಳಾಪುರ ತಾ. ಅಗಲಗುರ್ಕಿ ಗ್ರಾಮದಲ್ಲಿ ಬಾಲಕರ ದೈಹಿಕ ಶಿಕ್ಷಣ ಕಾಲೇಜು ವಿದ್ಯಾರ್ಥಿ ನಿಲಯದ ನಕ್ಷೆ ಮತ್ತು ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** ನಿರ್ದೇಶಕರು, (ಪ್ರೌಢ ಶಿಕ್ಷಣ) ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರು ರವರ ಪತ್ರ ಸಂಖ್ಯೆ:ಯೋ:7:ದೈ ಶಿ ಕಾ ನಿ ಆ ಅನು 53/2009-10 ದಿನಾಂಕ: 25-11-2010.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ, ನಿರ್ದೇಶಕರು, (ಪ್ರೌಢ ಶಿಕ್ಷಣ) ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರುರವರು, ಚಿಕ್ಕಬಳ್ಳಾಪುರ ತಾ. ಅಗಲಗುರ್ಕಿ ಗ್ರಾಮದಲ್ಲಿ ಬಾಲಕರ ದೈಹಿಕ ಶಿಕ್ಷಣ ಕಾಲೇಜು ವಿದ್ಯಾರ್ಥಿ ನಿಲಯದ ನಿರ್ಮಾಣಕ್ಕಾಗಿ 2009-10 ಮತ್ತು 2010-11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2202-01-800-1-35-059 (ಯೋಜನೆ) ಅಡಿ ಒಟ್ಟು 53 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಿರುವುದಾಗಿ ತಿಳಿಸಿ, ಈ ಕಟ್ಟಡ ನಿರ್ಮಾಣಕ್ಕಾಗಿ 99.50 ಲಕ್ಷ ರೂ.ಗಳ ನಕ್ಷೆ ಮತ್ತು ಅಂದಾಜು ಪಟ್ಟಿಯನ್ನು ಚಿಕ್ಕಬಳ್ಳಾಪುರ ನಿರ್ಮಿತಿ ಕೇಂದ್ರದಿಂದ ಪಡೆದಿದ್ದು ಸದರಿ ನಕ್ಷೆ ಮತ್ತು ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 51 ಹೆಚ್‌ಪಿಯು 2010, ಬೆಂಗಳೂರು, ದಿನಾಂಕ 08.03.2011**

ಮೇಲೆ ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಬಳ್ಳಾಪುರ ತಾ. ಅಗಲಗುರ್ಕಿ ಗ್ರಾಮದಲ್ಲಿ ಬಾಲಕರ ದೈಹಿಕ ಶಿಕ್ಷಣ ಕಾಲೇಜು ವಿದ್ಯಾರ್ಥಿ ನಿಲಯದ ನಿರ್ಮಾಣದ 99.50 ಲಕ್ಷ ರೂ.ಗಳ ನಕ್ಷೆ ಮತ್ತು ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರಿಗೆ ಈ ಕೆಳಕಂಡ ಷರತ್ತನ್ನು ವಿಧಿಸಿ ಅನುಮತಿ ನೀಡಿದೆ.

ಷರತ್ತುಗಳು:

2009-10 ಮತ್ತು 2010-11ನೇ ಸಾಲಿಗೆ ಈ ಉದ್ದೇಶಕ್ಕಾಗಿ ಲೆಕ್ಕ ಶೀರ್ಷಿಕೆ 2202-01-800-1-35-059 (ಯೋಜನೆ) ಬಿಡುಗಡೆ ಮಾಡಿರುವ 53.00 ಲಕ್ಷ ರೂ.ಗಳನ್ನು ಬಳಸಿಕೊಂಡು ಕೂಡಲೇ ಕಾಮಗಾರಿಯನ್ನು ಪ್ರಾರಂಭಿಸತಕ್ಕದ್ದು.

ಕಾಮಗಾರಿಯನ್ನು ನಿರ್ಮಿತಿ ಕೇಂದ್ರದಿಂದ ಪ್ರಚಲಿತವಿರುವ ಕರ್ನಾಟಕ ಪಾರದರ್ಶಕತೆ ಅಧಿನಿಯಮದನ್ವಯ ಕೈಗೊಳ್ಳತಕ್ಕದ್ದು.

ಎಲ್ಲಾ ಖರೀದಿಗಳಿಗೆ ಸಂಬಂಧಿಸಿದಂತೆ ಪ್ರಚಲಿತವಿರುವ ಕರ್ನಾಟಕ ಪಾರದರ್ಶಕ ಕಾಯ್ದೆಯ ಎಲ್ಲಾ ನಿಯಮಗಳನ್ನೂ ಚಾಚೂ ತಪ್ಪದೇ ಪಾಲಿಸತಕ್ಕದ್ದು.

ಕಾಮಗಾರಿಯ ಗುಣ ಮಟ್ಟದ ಬಗ್ಗೆ ಇಲಾಖೆಯ ಅಧಿಕಾರಿಗಳು ಆಗಿಂದ್ದಾಗ್ಗೆ ಪರಿಶೀಲಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಐ.ಎಫ್. ಮಾಗಿ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

ಪಿ.ಆರ್. 685

## COMMERCE & INDUSTRIES SECRETARIAT

**Sub :** Approval to the Project Proposal of M/s. GM Sugar and Energy Ltd., to enhance the crushing capacity of existing Sugar Factory from 1800 TCD to 2500 TCD and establish 18 MW Cogeneration Plant at Sangur Village, Haveri Taluk & District.

**Read :** Proceedings of the 24th State High Level Clearance Committee (SHLCC) Meeting held on 24-01-2011.

**Preamble :**

M/s. GM Sugar and Energy Ltd., proposes to enhance the crushing capacity of existing Sugar Factory from 1800 TCD to 2500 TCD and establish 18 MW Cogeneration Plant at Sangur Village, Haveri Taluk & District, with an investment of ₹ 127 Crores, generating employment to about 152 persons.

In the 24th State High Level Clearance Committee (SHLCC) Meeting held on 24-01-2011, the proposal of the Company was discussed and approved.

Government has examined the recommendations made by the State High Level Clearance Committee in the 24th Meeting held on 24-01-2011, in all aspects.

Hence the following Order.

**Government Order No. : CI 74 SPI 2011, Bangalore, Dated : 25-02-2011**

Government is pleased to accord in principle approval to the Project Proposal of M/s. GM Sugar and Energy Ltd., to enhance the crushing capacity of existing Sugar Factory from 1800 TCD to 2500 TCD and establish 18 MW Cogeneration Plant at Sangur Village, Haveri Taluk & District, with an investment of ₹ 127 Crores, generating employment to about 152 persons and extend the following infrastructure facilities, incentives and concessions.

**INFRASTRUCTURE FACILITIES :**

1. **Land :** Existing leased land of Karnataka Sahakari Sakkare Kharkane Ltd. in Sangur Village, Haveri Taluk & District.

Hence the following Order.

**Government Order No. CI 49 SPI 2010, Bangalore, Dated 11-03-2011**

Government is pleased to accord approval to the acquisition and allotment of 3000 acres of land in Jantli Village of Gadag District by KIADB as SUC, for the project proposal of M/s. Posco India Pvt. Ltd., subject to the condition that the land identified should not over lap with any other project.

Other terms and conditions, remain the same as in the G.O. read at (1) above.

By Order and in the name of the Governor of Karnataka
**A. V. Srinivasa Dikshit**
Desk Officer (Technical Cell)
Commerce & Industries Department.

P.R. 834

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯದ ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳಿಗೆ ಸಂಬಂಧಿಸಿದಂತೆ "ವೆಂಚರ್ ಕ್ಯಾಪಿಟಲ್ ಫಂಡ್" ಅಡಿ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :** 1. 2009–10ರ ಆಯವ್ಯಯದ ಲೆಕ್ಕ ಶೀರ್ಷಿಕೆ "4852–02–800–0–04" ಅಡಿಯಲ್ಲಿ ರೂ. 100 ಲಕ್ಷಗಳ ಅನುದಾನ.

**2.** ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ರವರ ಅಧ್ಯಕ್ಷತೆಯಲ್ಲಿ ದಿನಾಂಕ 06–05–2010 ರಂದು ನಡೆದ ಸಭೆಯ ನಡವಳಿಗಳು.

**3.** ಸರ್ಕಾರಿ ಆದೇಶ ಸಂಖ್ಯೆ: ಸಿಐ 234 ಎಸ್‌ಪಿಐ 2010, ದಿನಾಂಕ 13–09–2010

**4.** ಅಪರ ನಿರ್ದೇಶಕರು (ಎಂಎಸ್‌ಎಂಇ)ರವರ ಪತ್ರ ಸಂಖ್ಯೆ: ಎಂಎಸ್‌ಎಂಇ: ಕೈವಿಅ:ವೆಕ್ಯಾಫ:2010–11, ದಿನಾಂಕ 30–12–2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ತಿಳಿಸಿರುವಂತೆ ಆಯವ್ಯಯ ಭಾಷಣದಲ್ಲಿ ಘೋಷಿಸಿದಂತೆ, 2010–11ನೇ ಸಾಲಿನ ಆಯವ್ಯಯದಲ್ಲಿ ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳಿಗಾಗಿ "ಆಪತ್ತು ಬಂಡವಾಳ ನಿಧಿ" (Venture Capital Fund) ಯನ್ನು ಒದಗಿಸಿದ್ದು, ಮೇಲೆ (2)ರಲ್ಲಿ ಓದಲಾದ ದಿನಾಂಕ 06–05–2010ರ ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ "ಆಪತ್ತು ಬಂಡವಾಳ ನಿಧಿ" ಯನ್ನು ಸ್ಥಾಪಿಸಲು ನಿರ್ಧರಿಸಲಾಗಿದೆ. ಅದರಂತೆ ಮೇಲೆ (3)ರಲ್ಲಿ 2010–11ನೇ ಸಾಲಿನಲ್ಲಿ ಮೊದಲ ಕಂತಾಗಿ ಈ ಯೋಜನೆಯಡಿ ರೂ. 50.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಆಯವ್ಯಯದಲ್ಲಿ ಒದಗಿಸಿದ್ದ ಹಣದಲ್ಲಿ ಉಳಿದ ರೂ. 50.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಅಪರ ನಿರ್ದೇಶಕರು (ಎಂಎಸ್‌ಎಂಇ)ರವರು ಪ್ರಸ್ತಾಪಿಸಿರುತ್ತಾರೆ. ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 234 ಎಸ್‌ಪಿಐ 2010, ಬೆಂಗಳೂರು, ದಿನಾಂಕ : 15–03–2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರವು ಈ ಕೆಳಕಂಡಂತೆ ಅನುಮೋದನೆಯನ್ನು ನೀಡಿದೆ.

2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ '4852–02–800–0–04 Venture Capital Fund for Small & Medium Enterprises-211-Investment (Plan)" ರಡಿ ಉಳಿದಿರುವ ರೂ. 50.00 ಲಕ್ಷ (ಐವತ್ತು ಲಕ್ಷಗಳು ಮಾತ್ರ) ಗಳನ್ನು ಕೆಎಸ್‌ಐಐಡಿಸಿ ಸಂಸ್ಥೆಗೆ ಎರಡನೇ ಹಾಗೂ ಕೊನೆಯ ಕಂತಾಗಿ ಬಿಡುಗಡೆ ಮಾಡಲಾಗಿದೆ.

ಕೆಎಸ್‌ಐಐಡಿಸಿಯು ಸ್ವೀಕೃತ ಪತ್ರಕ್ಕೆ ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆರವರ ಮೇಲು ರುಜು ಪಡೆದು ಹಣವನ್ನು ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 55 ವೆಚ್ಚ–1/11 ದಿನಾಂಕ 07–03–2011ರಲ್ಲಿ ನೀಡಿರುವ ಅನುಮೋದನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ. ವಿ. ಶ್ರೀನಿವಾಸ ದೀಕ್ಷಿತ್**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 835

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಮೈಸೂರಿನಲ್ಲಿ ರೇಷ್ಮೆ ಶತಮಾನೋತ್ಸವ ಸ್ಮಾರಕ ಭವನವನ್ನು ನಿರ್ಮಿಸಲು ಅನುದಾನ ಒದಗಿಸುವ ಬಗ್ಗೆ.

**ಓದಲಾಗಿದೆ :**

1. ದಿನಾಂಕ 5–3–2010ರಂದು ಮಾನ್ಯ ಮುಖ್ಯಮಂತ್ರಿಯವರು ಮಂಡಿಸಿದ 2010–11ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ–53.
2. ರೇಷ್ಮೆ ಆಯುಕ್ತರಿಗೆ ಬರೆದ ಈ ಇಲಾಖೆಯ ಇದೇ ಸಂಖ್ಯೆಯ ದಿನಾಂಕ 8–4–2010ರ ಪತ್ರ.
3. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ: ಕೆಎಸ್‌ಐಸಿ/ಸಿಬ್ಬಂದಿ/ರೇಶಭ/10–11/514, ದಿನಾಂಕ 23–6–2010, 26–11–2010, 16–12–2010 ಹಾಗೂ 23–02–2011.

**ಪ್ರಸ್ತಾವನೆ :**

ದಿನಾಂಕ 5–3–2010ರಂದು ಮಾನ್ಯ ಮುಖ್ಯಮಂತ್ರಿಯವರು ಮಂಡಿಸಿದ 2010–11ನೇ ಸಾಲಿನ ಆಯವ್ಯಯದಲ್ಲಿ ಮೈಸೂರಿನಲ್ಲಿ ರೇಷ್ಮೆ ಶತಮಾನೋತ್ಸವ ಸ್ಮಾರಕ ಭವನವನ್ನು ನಿರ್ಮಿಸಲು ರೂ. 2.00 ಕೋಟಿ ನೀಡಲಾಗುವುದು ಎಂದು ಘೋಷಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸದರಿ ಅಂಶದ

ಅನುಷ್ಠಾನಕ್ಕೆ ಸೂಕ್ತ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರನ್ನು ಕೋರಲಾಗಿರುತ್ತದೆ.

ಮಾನ್ಯ ಮುಖ್ಯಮಂತ್ರಿಯವರು ಆಯವ್ಯಯ ಭಾಷಣದಲ್ಲಿ ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತದಡಿಯಲ್ಲಿ ಬರುವ ರೇಷ್ಮೆ ನೇಯ್ಗೆ ಕಾರ್ಖಾನೆಯಲ್ಲಿ ಶತಮಾನೋತ್ಸವ ಸ್ಮಾರಕ ಭವನವನ್ನು ನಿರ್ಮಿಸಲು ರೂ. 2.00 ಕೋಟಿ ಹಣವನ್ನು ನೀಡಿದ್ದು, ಅದರಂತೆ ಸೂಕ್ತ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸರ್ಕಾರವು ತಿಳಿಸಿರುವ ಹಿನ್ನೆಲೆಯಲ್ಲಿ ಸಂಪೂರ್ಣ ಅಂದಾಜು ಆಯವ್ಯಯ ಪಟ್ಟಿಯೊಂದಿಗೆ ಕಟ್ಟಡದ ನಕ್ಷೆಯನ್ನು ಸಲ್ಲಿಸಿ, ಅನುದಾನ ಬಿಡುಗಡೆ ಮಾಡುವಂತೆ ಕೋರಿ ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರಗಳಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಾಕೈ 12 ರೇಉನಿ 2010, ಬೆಂಗಳೂರು, ದಿನಾಂಕ : 15–03–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತದಡಿಯಲ್ಲಿ ಬರುವ ರೇಷ್ಮೆ ನೇಯ್ಗೆ ಕಾರ್ಖಾನೆ, ಮೈಸೂರು ಇಲ್ಲಿ ರೇಷ್ಮೆ ಉದ್ಯಮದ ಶತಮಾನೋತ್ಸವ ಸ್ಮಾರಕ ಭವನವನ್ನು ನಿರ್ಮಾಣ ಮಾಡುವುದಕ್ಕೆ ಸದರಿ ಕಟ್ಟಡಕ್ಕೆ ಅಗತ್ಯವಿರುವ ಹೆಚ್ಚುವರಿ ವೆಚ್ಚವನ್ನು ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತವೇ ತನ್ನ ಆರ್ಥಿಕ ಸಂಪನ್ಮೂಲದಿಂದ ಭರಿಸಬೇಕು ಹಾಗೂ ಸದರಿ ಸ್ಮಾರಕ ಭವನವನ್ನು ಸರ್ಕಾರಿ ಆಸ್ತಿಯಾಗಿ ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತವು ತನ್ನ ಸ್ವಂತ ವೆಚ್ಚದಿಂದ ನಿರ್ವಹಣೆ ಮಾಡಬೇಕು ಎಂಬ ಷರತ್ತಿನೊಂದಿಗೆ ರೂ. 2.00 ಕೋಟಿಗಳ (ರೂಪಾಯಿ ಎರಡು ಕೋಟಿಗಳು ಮಾತ್ರ) ಅನುದಾನವನ್ನು ರೇಷ್ಮೆ ಶತಮಾನೋತ್ಸವ ಸ್ಮಾರಕ ಭವನ ನಿರ್ಮಾಣಕ್ಕಾಗಿ ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತಕ್ಕೆ ನೀಡಲು ಮಂಜೂರಾತಿ ನೀಡಿದೆ.

ಈ ಬಂಡವಾಳ ಅನುದಾನವನ್ನು 2010–11ನೇ ಸಾಲಿನ ಪೂರಕ ಅಂದಾಜುಗಳು (ಎರಡನೇ ಕಂತು)ರ ಲೆಕ್ಕ ಶೀರ್ಷಿಕೆ 4851–00–107–1–02–ರೇಷ್ಮೆ ಶತಮಾನೋತ್ಸವ ಸ್ಮಾರಕ ಭವನ ಇದರಡಿಯಲ್ಲಿ ಒದಗಿಸಲಾಗಿರುವ ಅನುದಾನದಿಂದ ಭರಿಸತಕ್ಕದ್ದು.

ಖಜಾನೆಯಲ್ಲಿ ಪೇಯೀಸ್ ರಸೀದಿ (payees receipt) ನ ಮುಖಾಂತರ ರೇಷ್ಮೆ ಕೃಷಿ ಮತ್ತು ಅಭಿವೃದ್ಧಿ ಆಯುಕ್ತರು ಮತ್ತು ರೇಷ್ಮೆ ನಿರ್ದೇಶಕರು ಸೆಳೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ/1555/ವೆಚ್ಚ–1 2010, ದಿನಾಂಕ 21–10–2010ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ)

ಪಿ.ಆರ್. 836 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## COMMERCE AND INDUSTRIES SECRETARIAT

**Sub :** Approval to the Project Proposal of M/s. Wuerth Elektronik CBT India Pvt. Ltd., to establish an Industry for manufacture of "Printed Circuit Boards" in plot No. 554 A & B, 556, 557, 558 & 559, Industrial Growth Center, Hassan District (Agro and Food Processing Zone) – Approval for change of location.

**Read :** 1. Proceedings of the 7th State High Level Clearance Committee (SHLCC) Meeting held on 28-08-2006.

2. 24th State High Level Clearance Committee (SHLCC) Meeting held on 24-01-2011.

**Preamble :**

M/s. Wuerth Elektronik CBT India Pvt. Ltd., has proposed to establish an unit for manufacture of "Printed Circuit Boards 1,00,000 sqmt" in Mogarahalli, Srirangapatna Taluk, Mandya District with an investment of Rs. 180 crores, this project is expected to provide employment to 350 persons.

In the proposal submitted before the 7th State High Level Clearance (SHLCC) Meeting held on 28-08-2006, it was resolved to provide various infrastructure facilities as well as incentives and concessions as envisaged in Industrial Policy 2006-11. SHLCC in its meeting has approved the project proposal. Further, the company has changed location for its own reasons and revised proposal has been submitted reducing the investment to Rs. 100 crores instead of Rs. 180 crores. This subject is placed before 24th SHLCC.

The State High Level Clearance Committee, (SHLCC) after detailed discussions about the project proposal of the said company, has accorded its approval vide proceedings dated 24-01-2011, read at (2) above.

Government has examined the recommendations made by the State High Level Clearance Committee in the 24th Meeting held on 24-01-2011, in all aspects.

Hence the following Order.

**Government Order No. CI 108 SPI 2011, Bangalore, dated 16-03-2011**

Government is pleased to accord in principle approval to the Project Proposal of M/s. Wuerth Elektronik CBT India Pvt. Ltd., to manufacture "Printed Circuit Boards 1,00,000 sqmt" in Hassan District, with an investment of Rs. 100 crores, generating employment to about 350 persons and extend the following infrastructure facilities, incentives and concessions.

**INFRASTRUCTURE FACILITIES :**

1. **Land:** 20 acres to be allotted by KIADB at plot No. 554 A & B, 556, 557, 558 & 559, Industrial Growth Center, Hassan, (Agro and Food Processing Zone)
2. **Water:** 200 KLPD to be supplied by KIADB
3. **Power:** 2000 KVA to be serviced by CESCOM
4. **Incentives and Concessions:** As per applicable Industrial Policy of the State

**GENERAL TERMS AND CONDITIONS :**

1. **Environment:** The promoters to obtain CFE and CFO from KSPCB
2. **Employment:** The company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka. A copy of Human Resources Development plan shall be sent to the Commissioner for I.D. & Director of Industries and Commerce for monitoring.
3. **Vendor Development:** Wherever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
4. **Social Infrastructure Development:** The company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
5. **Others:**
   d) The project proponents shall adopt rainwater harvesting, waste water recycling and water conservation techniques. Zero discharge facility should be adopted wherever applicable.
   e) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

Validity of the approval is of two years from the date of issue.

By Order and in the name of the Governor of Karnataka
**A. V. Srinivasa Dikshit**
Desk Officer (Technical Cell)
Commerce & Industries Department

P.R. 837

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

ಸೇರ್ಪಡೆ

ಸಂಖ್ಯೆ: ಕಸಂವಾಪ್ರ 145 ಕೆಎಂಯು 2009, ಬೆಂಗಳೂರು. ದಿನಾಂಕ 16–03–2011

ದಿನಾಂಕ 04–03–2011ರ ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 145 ಕೆಎಂಯು 2009ರ ಆದೇಶ ಭಾಗದ ಮೊದಲನೇ ಪ್ಯಾರಾದಲ್ಲಿ ಒಟ್ಟು ರೂ. 1000.00 ಲಕ್ಷ"

ರ ನಂತರ ಈ ಕೆಳಗಿನಂತೆ ಸೇರಿಸಿ ಓದಿಕೊಳ್ಳುವುದು:–

"ಈ ಮೊತ್ತವನ್ನು ಆಯುಕ್ತರು ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಬೆಂಗಳೂರು ರವರ ಬ್ಯಾಂಕ್ ಖಾತೆ ಸಂಖ್ಯೆ 64048128996ಕ್ಕೆ ತಾತ್ಕಾಲಿಕವಾಗಿ ಜಮೆ ಮಾಡುವುದು. ಸಹ್ಯಾದ್ರಿ ಪಾರಂಪರಿಕ ಅಭಿವೃದ್ಧಿ ಪ್ರಾಧಿಕಾರವು ರಚನೆಯಾದ ನಂತರ ಈ ಮೊತ್ತವನ್ನು ಪ್ರಾಧಿಕಾರದ ಖಾತೆಗೆ ವರ್ಗಾಯಿಸತಕ್ಕದ್ದು."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ), (ಪ್ರ)

ಪಿ.ಆರ್. ನಂ. 838